# ಕಣ್ಣಿನ ರೋಗಗಳು

ಎಸ್. ಟಿ. ಪುಟ್ಟಣ್ಣ




ಬೆಂಗಳೂರು ವಿಶ್ವವಿದ್ಯಾಲಯ
ಬೆಂಗಳೂರು

KANNINA ROGAGALU
by Dr. S. T. Puttanna
Published by Prasaranga, Bangalore University,
Bangalore. pp. 116+viii. Second Edition 1981



ಪ್ರಕಾಶಕರು :
ಕೆ. ಸಿ. ಶಿವಪ್ಪ
ನಿರ್ದೇಶಕ (ಕಾರ್ಯನಿರ್ವಾಹಕ)
ಪ್ರಸಾರಾಂಗ
ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು–560 056
ಪ್ರಕಟಣ ಸಹಾಯಕ :
ಪುಂಡಲೀಕ ಹಾಲಂಬಿ

ಬೆಲೆ : 50 ಪೈಸೆ

ಮುದ್ರಕರು :
ರಶ್ಮಿ ಉದ್ಯಮಕೇಂದ್ರ, ಜಯಲಕ್ಷ್ಮೀಪುರಂ, ಮೈಸೂರು–12

# ಮುನ್ನುಡಿ

ವಿಶ್ವವಿದ್ಯಾಲಯಗಳು ಕೇವಲ ತಿಳುವಳಿಕೆಯ ಕೇಂದ್ರಗಳಾದರೆ ಸಾಲದು. ಅವು ಸುತ್ತಮುತ್ತಲಿನ ಜನತೆಯ ಶೈಕ್ಷಣಿಕ-ಸಾಂಸ್ಕೃತಿಕ ಆಗುಹೋಗುಗಳಲ್ಲಿ ಸಹ ಸಕ್ರಿಯವಾಗಿ ಪಾಲ್ಗೊಳ್ಳುವುದು ಆವಶ್ಯಕ. ಪಾಠಪ್ರವಚನ, ಉನ್ನತ ವ್ಯಾಸಂಗ ಮತ್ತು ಸಂಶೋಧನೆಗಳಿಗೆ ಮಾತ್ರ ವಿಶ್ವವಿದ್ಯಾಲಯಗಳ ಕಾರ್ಯವ್ಯಾಪ್ತಿ ಸೀಮಿತವಾಗಿರಬಾರದು. ಸಾಮಾನ್ಯ ಜನತೆಯಲ್ಲಿ ಅರಿವಿನ ಸಿರಿಯನ್ನು ಹಂಚುವ ಹೊಣೆ ಹೊತ್ತು ವಿಶ್ವವಿದ್ಯಾಲಯಗಳು ಜ್ಞಾನ ಪ್ರಸಾರ ಕೇಂದ್ರಗಳಾಗಿ ಮುನ್ನಡೆಯಬೇಕು.

ಬೆಂಗಳೂರು ವಿಶ್ವವಿದ್ಯಾಲಯವು ಕಳೆದ ನಾಲ್ಕೈದು ವರ್ಷಗಳಿಂದ ನಗರದ ನಾನಾ ಸಂಘಸಂಸ್ಥೆಗಳಲ್ಲಿ, ಕಾರ್ಖಾನೆ ಕಾರ್ಮಿಕ ಕೂಟಗಳಲ್ಲಿ ಹಾಗೂ ಗ್ರಾಮಾಂತರ ಪ್ರದೇಶಗಳಲ್ಲಿ ಪ್ರಚಾರೋಪನ್ಯಾಸಗಳನ್ನು ಏರ್ಪಡಿಸುತ್ತ ಬಂದಿದೆ. ಆಯಾ ವಿಷಯಗಳಲ್ಲಿ ಪರಿಣತರಾದವರು ಭಾಷಣಗಳನ್ನು ನೀಡಿ, ಅನಂತರ ಅವುಗಳನ್ನು ಪುಸ್ತಕರೂಪದಲ್ಲಿ ಪ್ರಕಟಿಸಲು ನಮ್ಮೊಡನೆ ಸಹಕರಿಸುತ್ತಿರುವುದು ಸಂತಸದ ಸಂಗತಿ. ಅತ್ಯಧಿಕ ಸಂಖ್ಯೆಯಲ್ಲಿ ನಮ್ಮ ಜನತೆಯ ಕೈಸೇರಲೆಂದು ಈ ಕಿರುಹೊತ್ತಿಗೆಗಳನ್ನು ಸುಲಭ ಬೆಲೆಯಲ್ಲಿ ಪ್ರಕಟಿಸುತ್ತಿದ್ದೇವೆ. ಕನ್ನಡ ಸಾಹಿತ್ಯದ ವಿವಿಧ ಪ್ರಕಾರಗಳ ಶ್ರೀಮಂತಿಕೆಯನ್ನು ಹೆಚ್ಚಿಸಿ, ಜನಸಾಮಾನ್ಯರ ತಿಳಿವನ್ನು ಉತ್ತಮಗೊಳಿಸುವ ದಿಸೆಯಲ್ಲಿ ಈ ಹೊತ್ತಿಗೆಗಳು ಸಹಕಾರಿಯಾಗಲೆಂದು ನಾನು ಮನಸಾರೆ ಹಾರೈಸುತ್ತೇನೆ.

ಎಂ. ಎನ್. ವಿಶ್ವನಾಥಯ್ಯ
ಉಪಕುಲಪತಿ

## ಮೊದಲ ಮಾತು *

ನೇತ್ರ ವಿಜ್ಞಾನವನ್ನು ಕುರಿತು ಜನಸಾಮಾನ್ಯರಿಗೆ ಅರ್ಥ ವಾಗುವಂತಹ ಪುಸ್ತಕಗಳು ಕನ್ನಡದಲ್ಲಿ ಹೆಚ್ಚಾಗಿ ಬಂದಿಲ್ಲ. ಮೈಸೂರು ವಿಶ್ವವಿದ್ಯಾನಿಲಯದ ಪ್ರಚಾರ ಪುಸ್ತಕ ಮಾಲೆಯಲ್ಲಿ "ಕಣ್ಣು ಮತ್ತು ಅದರ ರಕ್ಷಣೆ" ಎನ್ನುವ ವಿಷಯವಾಗಿ ದಿವಂಗತ ಡಾ|| ಡಿ. ಶಾಮಣ್ಣನವರು ಮೊದಲ ಬಾರಿಗೆ ಒಂದು ಕಿರು ಹೊತ್ತಿಗೆಯನ್ನು ಬೆಳಕಿಗೆ ತಂದರು. 1960ರಲ್ಲಿ ಸಾಹಿತ್ಯ ಮತ್ತು ಸಂಸ್ಕೃತಿ ಅಭಿವೃದ್ಧಿ ಇಲಾಖೆಯವರು "ನಿಮ್ಮ ದೃಷ್ಟಿ"ಯನ್ನು ಪ್ರಕಟಿಸಿದರು. ಬೆಂಗಳೂರು ವಿಶ್ವವಿದ್ಯಾನಿಲಯದ ಪ್ರಸಾರಾಂಗ ವಿಭಾಗದವರು ಕಣ್ಣಿನ ರೋಗಗಳನ್ನು ಕುರಿತು ಉಪನ್ಯಾಸ ಕೊಡುವಂತೆ ನನಗೆ ಕರೆಯಿತ್ತರು. ಅಲ್ಲದೆ ಅದರ ವಿಷಯವಾಗಿ ಒಂದು ಪುಸ್ತಕವನ್ನು ಸಿದ್ಧಪಡಿಸುವಂತೆ ನನಗೆ ಆದೇಶವಿತ್ತರು. ಅದರ ಫಲವೇ ಈ ಕಿರುಹೊತ್ತಿಗೆ.

ಶಿಶುವು ಗರ್ಭದಲ್ಲಿ ಮೂಡಿ ಬೆಳೆದು ಶೈಶವಾವಸ್ಥೆಯನ್ನು ಕಳೆದು ಬೆಳೆದು ಪ್ರಾಪ್ತ ವಯಸ್ಕನಾಗಿ ದುಡಿದು ಮುಪ್ಪುಕವಿದು ಜರೆಯ ಅಧೀನವಾಗುವವರೆಗೆ ವಿವಿಧ ಹಂತಗಳಲ್ಲಿ ಕಾಣಿಸಿ ಕೊಳ್ಳುವ ದೃಷ್ಟಿಯ ಶತ್ರುಗಳನ್ನು ಅಂದರೆ ಕುರುಡಿನ ಕಾರಣ ಗಳನ್ನು ವಿವರವಾಗಿ ಚಿತ್ರಿಸಲು ಇಲ್ಲಿ ಪ್ರಯತ್ನಿಸಿದ್ದೇನೆ.

ಕನ್ನಡದಲ್ಲಿ ಈ ಬಗೆಯ ವೈದ್ಯ ವಿಜ್ಞಾನದ ಲೇಖನಗಳ ಕೊರತೆ ಯನ್ನು ತುಂಬಲು ಮುಂದೆ ಬಂದಿರುವ ಬೆಂಗಳೂರು ವಿಶ್ವ ವಿದ್ಯಾನಿಲಯದ ಪ್ರಸಾರಾಂಗ ಶಾಖೆಯ ಕಾರ್ಯವು ತುಂಬಾ ಸ್ತುತ್ಯವಾಗಿದೆ, ಇಂತಹ ಹತ್ತಾರು ಹೊತ್ತಿಗೆಗಳು ಬೆಂಗಳೂರು ವಿಶ್ವವಿದ್ಯಾಲಯದ ಆಶ್ರಯದಲ್ಲಿ ಬೆಳಕಿಗೆ ಬರುವಂತಾಗಲೆಂದು ಆಶಿಸುತ್ತೇನೆ.

ಎಸ್. ಟಿ. ಪುಟ್ಟಣ್ಣ

---

* ಕೃತಿಯ ಮೊದಲ ಮುದ್ರಣದಿಂದ

# ಪರಿವಿಡಿ

# 1. ಕಣ್ಣಿನ ಅಂಗರಚನೆಗೆ ಸಂಬಂಧಿಸಿದ ಹುಟ್ಟುಕಣ್ಣು ರೋಗಗಳು

ವೈದ್ಯಶಾಸ್ತ್ರದ ಮುನ್ನಡೆಯಲ್ಲಿ ಇತ್ತೀಚೆಗೆ ಕೆಲವು ರೋಗಗಳ ಮೂಲವನ್ನು ಪತ್ತೆ ಹಚ್ಚುವುದರಲ್ಲಿ ತಳಿಶಾಸ್ತ್ರವು ಹೊಸ ಬೆಳಕನ್ನು ಚೆಲ್ಲಿದೆ. ನಮ್ಮ ದೇಹವು ಅನೇಕ ಸಹಾಸ್ರಾರು ಅಣು ಗಳಿಂದ ರಚಿತವಾಗಿರುವ ಒಂದು ದಿವ್ಯ ಸೌಧವೆನ್ನಬಹುದು. ಸೌಧದ ನಿರ್ಮಾಣದಲ್ಲಿ ಇಟ್ಟಿಗೆಗಳು ಹೇಗೋ ಹಾಗೆ ದೇಹದ ರಚನೆಯಲ್ಲಿ ಅಣುಗಳನ್ನು ಇಟ್ಟಿಗೆಗಳಿಗೆ ಹೋಲಿಸಬಹುದು. ಪ್ರತಿಯೊಂದು ಅಣುವಿನಲ್ಲಿಯೂ ಜೀವರಸದಿಂದ ಸುತ್ತುವರೆ ದಿರುವ ಗೋಲಾಕಾರದ ಚೇತನ ಬಿಂದುವೊಂದು ಅಣುವಿನ ಕೇಂದ್ರ ಭಾಗದಲ್ಲಿರುವುದನು ಸೂಕ್ಷ್ಮದರ್ಶಿನಿಯಲ್ಲಿ ನೋಡ ಬಹುದು. ಅಣುವಿನ ಈ ಕಾರ್ಯಕಲಾಪಗಳ ಮೇಲೆ ಚೇತನ ಬಿಂದುವು ಹತೋಟಿಯನ್ನು ಪಡೆದಿದೆ. ಚೇತನ ಬಿಂದುವಿನೊಳಗೆ ದಾರದಂತಹ 46 ವರ್ಣತಂತು ( chromosomes ) ಗಳಿವೆ. ಈ ವರ್ಣತಂತುಗಳ ಹೊರಮೈಯಲ್ಲಿ ಒಂದು ಪೀಳಿಗೆಯಿಂದ ಇನ್ನೊಂದು ಪೀಳಿಗೆಗೆ ವ್ಯಕ್ತಿಯ ಗುಣಲಕ್ಷಣಗಳನ್ನು ಒಯ್ಯಲು ಸಹಕಾರಿಯಾದ ಜನ್ಮಬಿಂದುಗಳು ಸರಪಳಿಯಂತೆ ಹೆಣೆದಿವೆ. ಜನ್ಮ ಬಿಂದುಗಳಲ್ಲಿ ಅಬಲ ಮತ್ತು ಪ್ರಬಲ ಎಂದು ಎರಡು ಬಗೆ ಯುಂಟು. ಜನ್ಮಬಿಂದುಗಳು ವಿಕೃತಿ ( mutation ) ಗೊಂಡಾಗ ಎರಡು ಅಥವಾ ಹಲವಾರು ರೂಪಗಳನ್ನು ತಾಳಿ ವಿವಿಧ ರೀತಿ ಯಲ್ಲಿ ವರ್ತಿಸಿ ವ್ಯಕ್ತಿಯಲ್ಲಿ ಹಲವಾರು ರೀತಿಯ ಹುಟ್ಟು ರೋಗಗಳಿಗೆ ಎಡೆ ಕೊಡುವುವು. ಒಂದು ಬಗೆಯ ಜನ್ಮಬಿಂದು ರೂಪವು ವಿವಿಧ ವಾತಾವರಣಗಳಲ್ಲಿ ಬೇರೆ ರೀತಿಯಲ್ಲಿ ವರ್ತಿ ಸುವುದೂ ಉಂಟು. ವ್ಯಕ್ತಿಯು ಪ್ರದರ್ಶಿಸುವ ಪ್ರತಿಯೊಂದು

ಗುಣಕ್ಕೂ ಕಾರಣಭೂತವಾದ ಒಂದು ಅಥವಾ ಹೆಚ್ಚಾದ ಜನ್ಮ ಬಿಂದುಗಳಿರುತ್ತವೆ. ಜನ್ಮಬಿಂದುವಿಗೂ ಮತ್ತು ಗುಣಕ್ಕೂ ಸಂಬಂಧ ವನ್ನುಂಟುಮಾಡುವ ಮಧ್ಯವರ್ತಿಯಾದ ಕಿಣ್ವ ಇರುತ್ತದೆ. ಜನ್ಮ ಬಿಂದುವು ವಿಕೃತಿಗೊಂಡರೆ ಕಿಣ್ವವು ಸಂಶ್ಲೇಷಣೆಯಾಗದೆ ರಸಾ ಯನಿಕ ರಚನೆಯಲ್ಲಿ ಬದಲಾವಣೆಯನ್ನು ಹೊಂದಬಹುದು. ಅದ ರಿಂದ ಆ ಜನ್ಮಬಿಂದುವಿನಿಂದ ಪ್ರದರ್ಶಿತವಾಗಬೇಕಾಗಿರುವ ಅಂತಿಮ ಗುಣಲಕ್ಷಣಗಳು ಪ್ರದರ್ಶಿಸಲ್ಪಡುವುದಿಲ್ಲ.

ಇನ್ನು ತಳಿಶಾಸ್ತ್ರದ ತಳಹದಿಯ ಮೇಲೆ ರೂಪಿತವಾಗಿರುವ ಕಣ್ಣಿನ ರೋಗಗಳನ್ನು ತಿಳಿಯೋಣ. ಇವು ಯಾವುವೆಂದರೆ :

1. ಅನಯನತೆ ( Anophthalmos)

ಭ್ರೂಣಹಂತದಲ್ಲಿ ರೂಪಗೊಳ್ಳುತ್ತಿರುವ ಮೆದುಳಿನ ಎರಡು ಪಕ್ಕಗಳಿಂದ ನಯನೇಂದ್ರಿಯವು ಉಬ್ಬಿದ ಬೆಲೂನ್‌ನಂತೆ ಹೊರಕ್ಕೆ ಕಾಣಿಸಿಕೊಳ್ಳುವುದು. ಕೆಲವು ಸಂದರ್ಭಗಳಲ್ಲಿ ಈ ನಯನೇಂದ್ರಿಯವು ಮೂಡದೆ ಹಾಗೆಯೇ ಭ್ರೂಣವು ಬೆಳೆ ಯುವುದುಂಟು. ಹೀಗೆ ಹುಟ್ಟಿದ ಶಿಶುಗಳಲ್ಲಿ ಎರಡು ಕಣ್ಣು ಗುಡ್ಡೆಗಳೂ ರೂಪಗೊಂಡಿರುವುದಿಲ್ಲ. ಅದರ ಸ್ಥಳಗಳಲ್ಲಿ ಎರಡು ಡೊಗರೆಗಳಿರುತ್ತವೆ. ರೆಪ್ಪೆಗಳು ರೂಪಿತವಾಗಿದ್ದರೂ ನೋಡಲು ಮುಖ್ಯವಾದ ಕಣ್ಣುಗಳೇ ಇರುವುದಿಲ್ಲ. ಹುಟ್ಟಿದ ನಂತರ ಎಲ್ಲ ಮಕ್ಕಳಂತೆ ಈ ಮಕ್ಕಳೂ ಕಣ್ಣು ತೆರೆದು ನೋಡುವುದಿಲ್ಲ. ಆದ್ದ ರಿಂದ ಭಯಭ್ರಾಂತರಾಗಿ ತಂದೆತಾಯಿಗಳು ಸಲಹೆಗಾಗಿ ನೇತ್ರ ಚಿಕಿತ್ಸಕರಲ್ಲಿಗೆ ಮಗುವನ್ನು ಕರೆತರುವುದುಂಟು. ಅಬಲ ಮತ್ತು ಪ್ರಬಲ ಜನ್ಮಬಿಂದುಗಳಿಗನುಸಾರವಾಗಿ ಈ ಸ್ಥಿತಿಯ ಆನು ವಂಶಿಕವಾಗಿ ಒಂದು ಅಥವಾ ಹಲವಾರು ಮಕ್ಕಳಲ್ಲಿ ತಲೆದೋರು ವುದುಂಟು. ಇದು ವಾಸಿಮಾಡಲಾಗದ ಕುರುಡು.

## 2. ಪುಟಾಣಿ ಕಣ್ಣುಗಳು (Microphthalmia)

ಈ ಸ್ಥಿತಿಯಲ್ಲಿ ಮಗುವಿನ ಕಣ್ಣುಗಳು ಅತಿ ಚಿಕ್ಕದಾಗಿರುತ್ತವೆ. ಬಟಾಣಿ ಕಾಳಿನಷ್ಟು ಗಾತ್ರವಿರಬಹುದು, ಇಲ್ಲವೆ ಇನ್ನೂ ಚಿಕ್ಕದಿರಬಹುದು. ಈ ಸ್ಥಿತಿಯು ಇತರ ಹುಟ್ಟುದೋಷಗಳೊಂದಿಗೆ ಬೆರೆತಿರಬಹುದು. ರೆಪ್ಪೆಗಳು ಕೂಡ ಅತಿ ಪುಟ್ಟದಾಗಿ ಇರುತ್ತವೆ. ಕೆಳರೆಪ್ಪೆಯು ಊದಿಕೊಂಡು ಪುಟ್ಟ ಕಣ್ಣುಗುಡ್ಡೆಯೊಂದಿಗೆ ಸಂಪರ್ಕವುಳ್ಳ ಚೀಲವನ್ನು ಹೊಂದಿರಬಹುದು. ಈ ಸ್ಥಿತಿಯು ಆನುವಂಶಿಕವಾಗಿ ಹುಟ್ಟುವ ಮಕ್ಕಳಲ್ಲಿ ಕಾಣಿಸಿಕೊಳ್ಳಬಹುದು.

## 3. ಪುಟಾಣಿ ಕರಿಯು ಗುಡ್ಡು (Micro cornea)

ಸರಿಯಾಗಿ ಬೆಳೆದಿರುವ ಕಣ್ಣಲ್ಲಿ ಕರಿಯುಗುಡ್ಡು ಅತಿ ಪುಟ್ಟದಾಗಿರುವುದು. ಈ ಕಣ್ಣು ದೂರದೃಷ್ಟಿ ದೋಷವನ್ನು (Hypermetropia) ಹೊಂದಿರುವುದು. ಕಣ್ಣುಗುಡ್ಡೆಯ ಹಿಂಭಾಗವೂ ಕೂಡ ಚಿಕ್ಕದಾಗಿರುವುದು. ಈ ಕಣ್ಣುಗಳು ಕಣ್ಣೊಳಗಿನ ಅಂತರ್ದ್ರವದ ಒತ್ತಡದ ಹೆಚ್ಚಳಕ್ಕೆ ಗುರಿಯಾಗಬಲ್ಲವು.

## 4. ಪಾಂಡುರತೆ (Albinism)

ಸರ್ ಆರ್ಕಿಬಾಲ್ಡ್ ಗೆರಾಡ್‌ರು ಮೊದಲಸಾರಿಗೆ 1908 ರಲ್ಲಿ ಚಯಾಪಚಯ ಕ್ರಿಯೆಯ ಹುಟ್ಟು ತಪ್ಪುಗಳ ಬಗ್ಗೆ ಮೊದಲ ಗಮನ ಸೆಳೆದರು. ಜನ್ಮಬಿಂದುಗಳು ರಸಾಯನಿಕ ಕ್ರಿಯೆಗಳ ಮೇಲೆ ಹತೋಟಿ ಹೊಂದಿರುವುದರ ಮೂಲಕ ದೇಹದಲ್ಲಿನ ಅಣುಗಳ ಕಾರ್ಯಾಚರಣೆಗಳನ್ನು ನಿರ್ಧರಿಸಬಲ್ಲವೆಂಬುದಕ್ಕೆ ಸಾಕಷ್ಟು ಸಾಕ್ಷಿಗಳಿವೆ. ಹಾಗೆ ಜನ್ಮಬಿಂದು ರಸಾಯನಿಕ ಕ್ರಿಯೆಯನ್ನು ಬದಲಿಸಿದಲ್ಲಿ, ಚಯಾಪಚಯ ಕ್ರಿಯೆಯು ವ್ಯತ್ಯಾಸ ಹೊಂದುವು

ದಲ್ಲದೆ ಅಣುವಿನ ಸರಿಯಾದ ಕಾರ್ಯಾಚರಣೆಗೂ ಅಡ್ಡಿಯಾಗುವುದು. ಈ ಚಯಾಪಚಯ ಕ್ರಿಯೆಯ ಹುಟ್ಟುತಪ್ಪುಗಳಿಗೆ ಕಾರಕವಾಗಿರುವ ರಸಾಯನಿಕ ಬದಲಾವಣೆಗಳನ್ನು ಸ್ಪಷ್ಟವಾಗಿ ಗೊತ್ತುಹಚ್ಚಲು ಸಾಧ್ಯತೆಯಿದ್ದಲ್ಲಿ ಅವುಗಳನ್ನು ಸರಿಪಡಿಸಲು ಯತ್ನಿಸಬಹುದು. ಈ ಹಾದಿಯಲ್ಲಿ ಸರ್ ಅರ್ಚಿಬಾಲ್ಡ್ ಗೆರಾಡ್ ಪಾಂಡುರತೆಯ ಮೇಲೆ ಮೊದಲಬಾರಿಗೆ ಹೊಸ ಬೆಳಕನ್ನು ಚೆಲ್ಲಿದರು. ಚರ್ಮ, ಕೂದಲು ಮತ್ತು ಕಣ್ಣುಗಳಿಗೆ ಬಣ್ಣ ಕೊಡುವ ವಸ್ತುವಾದ ಮೆಲನಿನ್ ಬಣ್ಣವನ್ನು ದೇಹದಲ್ಲಿನ ಅಣುಗಳು, ಟೈರೋಸಿನ್ ಎಂಬ ಅಮೈನೋ ಆಸಿಡ್‌ನಿಂದ ಉತ್ಪಾದಿಸುವುವು. ಈ ರಸಾಯನಿಕ ಕ್ರಿಯೆಯನ್ನು ಜನ್ಮಬಿಂದುವು ಬದಲಿಸಿದಲ್ಲಿ ಮೆಲನಿನ್ ಬಣ್ಣದ ಅಭಾವದಿಂದ ಪಾಂಡುರತೆಯು ಗೋಚರವಾಗುವುದು. ಈ ಸ್ಥಿತಿಯಲ್ಲಿ ದೇಹದಾದ್ಯಂತವೂ ಮೆಲನಿನ್ ಬಣ್ಣದ ವಸ್ತುವಿನ ಬೆಳವಣಿಗೆಯ ಕೊರತೆ ಎದ್ದು ಕಾಣುವುದು. ಆದರಿಂದ ಈ ವ್ಯಕ್ತಿಗಳ ಚರ್ಮ, ಕೂದಲು, ಬಣ್ಣವಿರಬೇಕಾದ ಅಂಗಗಳು ಬಣ್ಣದ ಕೊರತೆಯಿಂದ ನಿರ್ವರ್ಣವಾಗಿರುವುವು. ಇವರನ್ನು ಪೂರ್ಣ ಬಿಳಿಯರೆನ್ನಬಹುದು. ಎರಡು ಅಬಲ ಜನ್ಮಬಿಂದುಗಳ ಮಿಲನದಿಂದ ಲೋಪವಾದ ಒಂದು ಕಿಣ್ವದ ಪ್ರಭಾವದಿಂದ ಫಿನೈಲ್ ಅಲಸಿನ್-ಟೈರೊಸಿನ್ ಆಮ್ಲಗಳ ಚಯಾಪಚಯ ಕ್ರಿಯೆ ಸುಗಮವಾಗಿ ನಡೆಯದೆ ತಪ್ಪುದಾರಿ ಹಿಡಿಯುವುದು. ಆದರಿಂದ ನಮ್ಮ ದೇಹಕ್ಕೆ ಬಣ್ಣಕೊಡುವ ಮೆಲನಿನ್ ಎಂಬ ಬಣ್ಣದ ವಸ್ತುವು ಉತ್ಪತ್ತಿಯಾಗುವುದಿಲ್ಲ. ಆದರಿಂದ ವ್ಯಕ್ತಿಯ ಚರ್ಮ ಮತ್ತು ಕೂದಲು, ಬಣ್ಣವಿರುವ ಅಂಗಗಳಾದ ದೃಷ್ಟಿಪಟಲ ಕಾಶಿಬಿಂದು – ಇವುಗಳು ವರ್ಣರಹಿತವಾಗಿ ಬಿಳುಪಾಗುವುವು. ಈ ದೋಷವು ಅನುವಂಶಿಕವಾಗಿ ಮಕ್ಕಳಲ್ಲಿ ಕಾಣಿಸಿಕೊಳ್ಳುವುದು. ಈ ಮಕ್ಕಳಲ್ಲಿ ಹೆಚ್ಚಿನ ಮಟ್ಟದ ಅಸಮ ದೃಷ್ಟಿ

ಯೊಂದಿಗೆ ಹತ್ತಿರ ದೃಷ್ಟಿಯು ಬೆರೆತಿರುವುದುಂಟು. ಬೆಳಕನ್ನು ನೋಡಲಾಗದೆ ಕಣ್ಣನ್ನು ಕಿರಿದು ಮಾಡಿಕೊಳ್ಳುವರು.

ಸಾಧಾರಣವಾಗಿ ಐವತ್ತು ಸಾವಿರ ಜನಸಂಖ್ಯೆಯಲ್ಲಿ ಈ ದೋಷ ಹೊತ್ತವರು ಏಳು ಮಂದಿ ಎಂದು ತಿಳಿದುಬಂದಿದೆ. ಇತ್ತೀಚೆಗೆ ನಡೆಸಿದ ಸಂಶೋಧನೆಗಳಿಂದ ದೇಹಕ್ಕೆ ಕೃತಕವಾಗಿ 'ಟೈರೋಸಿನೇಸ್' (tyrosinase) ಎಂಬ ಕಿಣ್ವವನ್ನು ಸೇರಿಸುವುದರಿಂದ ವರ್ಣಹೀನತೆಯನ್ನು ಗುಣಪಡಿಸುವ ಸಾಧ್ಯತೆಯನ್ನು ವ್ಯಕ್ತಪಡಿಸಿರುತ್ತಾರೆ.

ಕಾಶಿಬಿಂದುವಿನಲ್ಲಿ ಬಣ್ಣದ ವಸ್ತುವಿನ ನ್ಯೂನತೆಯಿಂದ ಕಾಶಿಬಿಂದುವು ಒಂದು ಬಗೆಯ ಕಂದು ಬಣ್ಣವನ್ನು ಹೊಂದುವುದು. ಜೊತೆಗೆ ದೃಷ್ಟಿಪಟಲವು ವರ್ಣರಹಿತವಾಗಿ, ರಕ್ತನಾಳಗಳಲ್ಲಿರುವ ಕೆಂಪು ರಕ್ತಕಣಗಳ ಬಣ್ಣದಿಂದ ಕಣ್ಣುಗಳು ನೋಡಲು ಕಂದು ಬಣ್ಣವಾಗಿರುವುವು. ಈ ಕಣ್ಣುಗಳು ಸೂರ್ಯರಶ್ಮಿಯನ್ನಾಗಲೀ, ಹೆಚ್ಚು ಬೆಳಕನ್ನಾಗಲೀ ನೋಡಲು ಅಸಮರ್ಥವಾಗಿರುವುವು. ಜೊತೆಗೆ ಹತ್ತಿರ ದೃಷ್ಟಿಯ ದೋಷವು ಬೆರೆತು ಸ್ಥಿರದೃಷ್ಟಿಯಿಲ್ಲವೆ ಕಣ್ಣುಗುಡ್ಡೆಗಳ ಚಲನವಲನಗಳು ಅಂಕೆ ಮೀರಿ ಇಷ್ಟ ಬಂದಂತೆ ಪಕ್ಕಕ್ಕೆ. ಇಲ್ಲವೆ ಮೇಲೆ ಕೆಳಗೆ ಇಲ್ಲವೆ ಗಾಲಿಯಂತೆ ಗುಂಡಗೆ ಸುತ್ತುತ್ತಿರುತ್ತವೆ. ಪೂರ್ಣ ವರ್ಣ ಹೀನತೆಯು ಬಹು ಅಪರೂಪ. ಸಾಧಾರಣವಾಗಿ ವರ್ಣ ಹೀನತೆಯು ದೃಷ್ಟಿಪಟಲ ಮತ್ತು ಕೊರಾಯಿಡ್ ಪದರಗಳಿಗೆ ಮಾತ್ರ ಮೀಸಲು. ಕಾಶಿಬಿಂದುವು ಬಿಳಿಚಿದ ನೀಲವರ್ಣವನ್ನು ಹೊಂದಿರಬಹುದು. ಮೆಳ್ಳಗಣ್ಣು ಕೂಡ ಬೆರತಿರಬಹುದು. ಆದರಿಂದ ಈ ದೋಷ ಹೊತ್ತ ಮಕ್ಕಳು ಸರಿಯಾದ ದೃಷ್ಟಿಯನ್ನು ಹೊಂದಿರುವುದಿಲ್ಲ. ಅಲ್ಲದೆ ಬೆಳೆದಂತೆ ಸಹಪಾಠಿಗಳ ಹಾಸ್ಯಕ್ಕೂ, ಮನೆಯಲ್ಲಿಯ ಮಂದಿಯ

ಟೀಕೆ ಟಿಪ್ಪಣಿಗಳಿಗೂ ಗುರಿಯಾಗಿ ಕೀಳ್ಭಾವನೆಯನ್ನು ತಾಳಿ, ತಮ್ಮ ವ್ಯಕ್ತಿತ್ವವನ್ನೇ ಬದಲಿಸಿಕೊಳ್ಳಬಲ್ಲರು. ಸೂರ್ಯನ ಬೆಳಕನ್ನು ನೋಡಲಾಗದುದರಿಂದ ಬೆಳಕು ಕಡಿಮೆಮಾಡುವ ತಂಪು ಕನ್ನಡಕಗಳನ್ನು ಹಾಕಿಕೊಳ್ಳಬೇಕು. ದೃಷ್ಟಿದೋಷಗಳಿಗೆ ನೇತ್ರ ಚಿಕಿತ್ಸಕರ ಸಲಹೆ ಪಡೆದು ದೋಷಕ್ಕೆ ತಕ್ಕಂತೆ ಸರಿಯಾದ ಬಣ್ಣದ ಕನ್ನಡಕಗಳನ್ನು ಧರಿಸಬೇಕು.

## 5. ಮಕ್ಕಳಲ್ಲಿ ಕಾಣುವ ಅಂಧತ್ವ (Amaurosis)

ಮಕ್ಕಳಲ್ಲಿ ಕಾಣುವ ಕುರುಡಿಗೂ ಒಂದು ಜೊತೆ ಅಬಲ ಜನ್ಮ ಬಿಂದುಗಳ ಸಮ್ಮಿಲನವೇ ಕಾರಣವೆಂದು ತಿಳಿದುಬಂದಿದೆ. ಈ ಸ್ಥಿತಿಯಲ್ಲಿ ಲೈಪಿಡ್ ಸ್ಪಿಂಗೋಮಯಲಿನ್ ಎಂಬ ವಸ್ತುವಿನ ರಚನೆಗೆ ಅಗತ್ಯವಾದ ಕಿಣ್ವದ ಕೊರತೆಯಿರುತ್ತದೆ. ಆದರಿಂದ ಈ ರೋಗದಿಂದ ನರಳುವ ಮಕ್ಕಳ ನರಾಣುಗಳಲ್ಲಿ ಸ್ಪಿಂಗೋ ಮಯಲಿನ್ ಶೇಖರವಾಗಿ ಕುರುಡು, ನರಗಳ ದೌರ್ಬಲ್ಯ, ಪಾರ್ಶ್ವ ವಾಯು ಮುಂತಾದ ಚಿಹ್ನೆಗಳು ಕಾಣಿಸಿಕೊಂಡು ಕೊನೆಗೆ ಮಕ್ಕಳು ಸಾವನ್ನಪ್ಪುವುವು.

## 6. ಮಕ್ಕಳಲ್ಲಿ ಆನುವಂಶಿಕವಾಗಿ ತಲೆದೋರುವ ಕುರುಡು ಮತ್ತು ಪೆದ್ದತನ (Amaurotic family idiocy)

ಎರಡು ಅಬಲ ಜನ್ಮಬಿಂದುಗಳ ಸಮಯುಗ್ಮ (homozygous) ಮಿಲನವೇ ಈ ಸ್ಥಿತಿಗೆ ಕಾರಣವೆಂದು ತಿಳಿದಿದೆ. ಅಂತೆಯೇ ಮತ್ತೆ ಎರಡು ಅಬಲ ಜನ್ಮಬಿಂದುಗಳ ಸಮ್ಮಿಲನವು ಇದೇ ಗುಂಪಿಗೆ ಸೇರಿದ ಬಾಲ್ಯದ ಪೆದ್ದುತನವನ್ನುಂಟು ಮಾಡುತ್ತದೆ, ಈ ರೋಗವು ಸಾಧಾರಣವಾಗಿ 'ಜ್ಯೂ' ಜನಾಂಗದ ಮಕ್ಕ

ಳಿಗೆ ಮಾತ್ರ ಸೀಮಿತವಾಗಿದ್ದರೂ ಕೆಲವು ಮಂದಿ ಆಂಧ್ರರಲ್ಲೂ ಈ ರೋಗವಿರುವುದೆಂದು ಇತ್ತೀಚೆಗೆ ತಿಳಿದಿದೆ. ಈ ರೋಗದ ಗತಿಯು ತೀವ್ರವಾಗಿದ್ದು ಹುಟ್ಟಿದ ಒಂದೆರಡು ವರ್ಷಗಳಲ್ಲೇ ಮಕ್ಕಳು ಸಾವನ್ನು ಅಪ್ಪಬೇಕಾಗುವುದು. ಬಾಲ್ಯದ ಪೆದ್ದುತನವುಳ್ಳ ಮಕ್ಕಳು ಸಾಧಾರಣವಾಗಿ ಒಂದೆರಡು ವರ್ಷಗಳಲ್ಲೇ ಕೊನೆಯುಸಿರು ಎಳೆಯಬೇಕಾಗುವುದು, ತಾರುಣ್ಯದ ಪೆದ್ದುತನವುಳ್ಳ ಮಕ್ಕಳು ಹುಟ್ಟಿದ ಐದನೆ ವರ್ಷವನ್ನು ನೋಡಬಲ್ಲರು.

ಮಗುವು ಹುಟ್ಟಿದಾಗ ಎಲ್ಲಾ ಮಕ್ಕಳಂತೆ ಸರಿಯಾದ ಬೆಳವಣಿಗೆಯಿಂದ ಕೂಡಿರುವುದು. ಮಗು ಬೆಳೆದಂತೆ ಕ್ರಮೇಣ ವಾತಾವರಣದಲ್ಲಿ ಆಸಕ್ತಿ, ಕುತೂಹಲಗಳನ್ನು ವ್ಯಕ್ತಪಡಿಸದೆ ಪೆದ್ದನಂತೆ ಕಾಣಿಸುವುದು. ಮಾಂಸಖಂಡಗಳ ನಿಶ್ಯಕ್ತಿಯಿಂದ ಇಂಥ ಮಗು ತಲೆ ಎತ್ತಿ ನೋಡಲು ಇಲ್ಲವೇ ಎಲ್ಲ ಮಕ್ಕಳಂತೆ ಕೂಡಲು ಯತ್ನಿಸುವುದಿಲ್ಲ. ಕ್ರಮೇಣ ಕೈಕಾಲುಗಳ ಸ್ವಾಧೀನ ತಪ್ಪಿ, ಎಳವು ( convulsions ) ತಲೆದೋರಿ, ಪೆದ್ದುತನವು ಹೆಚ್ಚಿ, ಕಣ್ಣುಗಳು ಕುರುಡಾಗಿ, ಬಾಹ್ಯಪ್ರಪಂಚದ ಅರಿವಿಲ್ಲದೆ, ದೇಹ ಸವೆದು ಸಾಯುವುವು.

### 7. ಮಕ್ಕಳಲ್ಲಿ ಆನುವಂಶಿಕವಾಗಿ ಕಾಣಿಸಿಕೊಳ್ಳುವ ದೃಷ್ಟಿನರ ಕ್ಷಯತೆ

ಬೆಳೆಯುವ ಮಕ್ಕಳಲ್ಲಿ ಶೈಶವಾವಸ್ಥೆಯಲ್ಲಿ ಈ ರೋಗವು ಕಾಣಿಸಿಕೊಳ್ಳುವುದು. ಹೆಣ್ಣುಗಂಡುಗಳು ಸಮನಾಗಿ ಈ ರೋಗಕ್ಕೆ ಬಲಿಯಾಗುವುವು. ಪ್ರಬಲ ಜನ್ಮಬಿಂದುವಿನ ಸಾಗಾಣಿಕೆಯಿಂದ ಮುಂದೆ ಹುಟ್ಟುವ ಪೀಳಿಗೆಯ ಮಕ್ಕಳಲ್ಲೂ ಈ ರೋಗವು ಹೆಚ್ಚು ಸಂಖ್ಯೆಯಲ್ಲಿ ಕಾಣಿಸಿಕೊಳ್ಳುವುದುಂಟು. ಕೆಲವು ಸಾರಿ

ವಂಶಕ್ಕೆ ಸೇರಿದ ಹೆಣ್ಣುಗಂಡುಗಳೆರಡೂ ರೋಗವಾಹಕರಾಗ ಬಲ್ಲರು.

8. ಆನುವಂಶಿಕವಾಗಿ ಪುರುಷರಲ್ಲಿ ಕಾಣಿಸಿಕೊಳ್ಳುವ ದೃಷ್ಟಿ ನರಕ್ಷಯತೆ

ಇದನ್ನು 'ಲೀಬರ್'ರವರ ರೋಗವೆನ್ನುತ್ತಾರೆ. ಇದಕ್ಕೆ ಸರಿಯಾದ ಕಾರಣವು ಇನ್ನೂ ಬೆಳಕಿಗೆ ಬಂದಿಲ್ಲ. 20ರ ವಯಸ್ಸಿನ ಹರೆಯದ ಗಂಡಸರಲ್ಲಿ ಈ ರೋಗವು ಹಠಾತ್ತನೆ ಕಾಣಿಸಿಕೊಳ್ಳುವುದು. ಎರಡು ಕಣ್ಣುಗಳು ಒಂದಾದ ಮೇಲೊಂದು ಈ ರೋಗಕ್ಕೆ ತುತ್ತಾಗುವುದುಂಟು. ದೃಷ್ಟಿನಾಶವು ಇದ್ದಕ್ಕಿದ್ದಂತೆಯೇ ತಲೆದೋರುವುದು. ಆರಂಭಾವಸ್ಥೆಯಲ್ಲಿ ಬಂದು ಹೋಗುವ ದೃಷ್ಟಿ ನರದ ಊತವೂ, ಇದರ ಫಲವಾಗಿ ದೃಷ್ಟಿನರದ ಕ್ಷಯಿಕೆಯೂ ಕ್ರಮೇಣ ತಲೆಹಾಕುವುವು. ಕೇಂದ್ರ ದೃಷ್ಟಿಯು ನಶಿಸಿ, ದೃಷ್ಟಿ ಎಲ್ಲೆಯ ಪಟಲದಲ್ಲಿ ಅಂಚಿನಲ್ಲಿ ಮಾತ್ರ ದೃಷ್ಟಿಯಿರುವುದು. ಆನುವಂಶಿಕವಾಗಿ ಕಾಣಿಸಿಕೊಳ್ಳುವ ಈ ರೋಗಕ್ಕೆ ಲಿಂಗಸಂಲಗ್ನ ಅಬಲ ಜನ್ಮಬಿಂದುಗಳ ಪ್ರಭಾವವೇ ಕಾರಣವೆನ್ನುತ್ತಾರೆ. ಆದರಿಂದಲೇ ಈ ರೋಗವು ಗಂಡಸರಿಗೆ ಮಾತ್ರ ಮೀಸಲು. ಸ್ತ್ರೀಯರಿಗೆ ರೋಗವಿಲ್ಲದಿದ್ದರೂ ರೋಗವಾಹಕರಾಗುವರು. ರೋಗ ತಗಲಿದ ಗಂಡಿನ ಅಕ್ಕತಂಗಿಯರು ವಿವಾಹವಾಗದೆ, ವಿವಾಹವಾದರೂ ಮಕ್ಕಳನ್ನು ಪಡೆಯದೆ ಇದ್ದಲ್ಲಿ ಈ ರೋಗವು ತಾನಾಗಿಯೇ ಗೋರಿಯನ್ನು ಕಾಣುತ್ತದೆ. ಈ ರೋಗವು ಸಾಧಾರಣವಾಗಿ 18 ರಿಂದ 23ರ ವಯಸ್ಸಿನ ಗಂಡುಗಳಲ್ಲಿ ಮಾತ್ರ ಕಾಣಿಸಿಕೊಳ್ಳುತ್ತದೆ.

ರೋಗವು ಕಾಣಿಸಿಕೊಂಡಾಗ ಒಂದು ಕಣ್ಣಲ್ಲಿ ದೃಷ್ಟಿಯು ಮೊದಲು ಕೆಲವು ದಿನಗಳಲ್ಲಿ ಇಲ್ಲವೆ ವಾರಗಳಲ್ಲಿ ಬಹು ಬೇಗನೆ

ಕುಗ್ಗಿ ಅನಂತರ ದೃಷ್ಟಿ ಕ್ರಮೇಣ ಕುಂದುತ್ತಾ ಬರುವುದು. ರೋಗ ತಗುಲಿದ ಎರಡು ತಿಂಗಳ ಹೊತ್ತಿಗೆ ದೃಷ್ಟಿಯು ಬಹು ಮಟ್ಟಿಗೆ ನಾಶವಾಗುವುದು. ಕೆಲವು ವಾರಗಳು ಕಳೆದ ನಂತರ ಇನ್ನೊಂದು ಕಣ್ಣಿನಲ್ಲೂ ದೃಷ್ಟಿಯು ಕಡಿಮೆಯಾಗುತ್ತಾ ಬರುವುದು, ಕೆಲವು ಸಾರಿ ಕಣ್ಣಲ್ಲಿ ನೋವು, ತಲೆಶೂಲೆ ಕಾಣಿಸಿಕೊಳ್ಳಬಹುದು.

# 2. ಗರ್ಭಾವಸ್ಥೆಯಲ್ಲಿ ಬೆಳೆಯುತ್ತಿರುವ ಶಿಶುವಿಗೆ ತಗಲುವ ರೋಗಗಳು

ಗರ್ಭಧಾರಣೆಯಾದ ನಂತರ ಬೆಳೆಯುತ್ತಿರುವ ಶಿಶುವಿನ ರೂಪ ರೇಖೆಗಳು ರೂಪಿತವಾಗಬೇಕಾಗಿರುವುದರಿಂದ ಈ ಗರ್ಭಾವಸ್ಥೆಯಲ್ಲಿ ಗರ್ಭಿಣಿಗೆ ತಗಲುವ ರೋಗ ರುಜಿನಗಳು ಭ್ರೂಣದ ಮೇಲೆ ಪ್ರಭಾವ ಬೀರಿ ಹುಟ್ಟು ಅಂಗ ದೋಷಗಳನ್ನುಂಟುಮಾಡಬಲ್ಲವು. ಆದರಿಂದ ಗರ್ಭಧಾರಣೆಯಾದ ಮೊದಲ ಮೂರು ತಿಂಗಳುಗಳು ಬೆಳೆಯುತ್ತಿರುವ ಶಿಶುವಿನ ಪರ್ವಕಾಲವೆನ್ನಬಹುದು. ಈ ಅವಧಿಯಲ್ಲಿ ತಾಯಿಗೆ 'ರುಬೆಲ್ಲ' ಎನ್ನುವ ಅತಿ ಸೂಕ್ಷ್ಮಾಣು ಜಾತಿಗೆ ಸೇರಿದ ಅಂದರೆ 'ವೈರಸ್' ಗುಂಪಿನ ರೋಗವು ತಗುಲಿದಲ್ಲಿ ಹೃದಯ, ಕಿವಿ ಮತ್ತು ಕಣ್ಣುಗಳ ಹುಟ್ಟು ದೋಷಗಳು ಕಾಣಿಸಿಕೊಳ್ಳುವ ಸಂಭವವುಂಟು. ಶಿಶುವಿನ ಹುಟ್ಟು ಕಣ್ಣರೆಗೆ 'ರುಬೆಲ್ಲ' ವೈರಸ್ಸೇ ಕಾರಣವೆನ್ನಬಹುದು.

ಟಾಕ್ಸೋಪ್ಲಾಸ್‌ಮೋಸಿಸ್ ಎಂಬ ಏಕಾಣು ಜೀವಿಯನ್ನು ತಾಯಿಯು ಬೆಳೆಯುತ್ತಿರುವ ಶಿಶುವಿಗೆ ಭ್ರೂಣಾವಸ್ಥೆಯಲ್ಲೇ ವರ್ಗಾಯಿಸಬಲ್ಲಳು. ಈ ರೋಗದ ಪರಿಣಾಮವಾಗಿ ಮಗುವಿನಲ್ಲಿ ಪ್ರಜ್ಞಾಹೀನತೆ, ಎಳವು ಕಾಣಿಸಿಕೊಳ್ಳುವುದು. ಈ ರೋಗವು ಮೆದುಳಿಗೂ ಹರಡಿ ಮೆದುಳಿನಲ್ಲಿ ಕ್ಷ ಕಿರಣದಿಂದ ನೋಡಬಹುದಾದ ಗಂಟುಗಳು ಗೋಚರವಾಗುವುವು. ಕಣ್ಣೊಳಗೆ ಹಳದಿ ಬಿಂದುವಿನ ಪ್ರದೇಶಕ್ಕೆ ಸೀಮಿತವಾಗಿರುವ ಕೊರಾಯಿಡ್ ಪದರವು ಊದಿಕೊಂಡು, ಕಲೆಯಾಗಿ ದೃಷ್ಟಿನಾಶವನ್ನುಂಟುಮಾಡಬಲ್ಲದು. ಅಂತೆಯೇ ತಾಯಿಯು ಗರ್ಭಾವಸ್ಥೆಯಲ್ಲೂ ಕೂಡ

ಪರಂಗಿ ರೋಗವನ್ನು ಬೆಳೆಯುತ್ತಿರುವ ಶಿಶುವಿಗೆ ವರ್ಗಾಯಿಸ ಬಲ್ಲಳು. ಅದರಿಂದ ಹುಟ್ಟಿದ ಶಿಶುವು ಹುಟ್ಟು ಕುರುಡನ್ನು ಅನುಭವಿಸಬೇಕಾಗುವುದು. ಇಲ್ಲವೇ ಮಗುವು 5 ರಿಂದ 15 ವರ್ಷದ ಅವಧಿಯಲ್ಲಿ ರೋಗ ಮರುಕಳಿಸಿ ಕರಿಯ ಗುಡ್ಡೆಯ ಮಧ್ಯ ಪದರಗಳು ಊದಿಕೊಂಡು ದೃಷ್ಟಿನಾಶವನ್ನು ಹೊಂದ ಬಹುದು.

ಶಿಶುವು ಗರ್ಭಕೋಶದಲ್ಲಿ ಬೆಳೆಯುತ್ತಿರುವ ಹಂತದಲ್ಲಿ ಗರ್ಭ ವೇಷ್ಟನದ ಬೇರ್ಪಡೆಯಿಂದಲೂ ಗರ್ಭಾವಸ್ಥೆಯ ಮೊದಲ ತಿಂಗಳುಗಳಲ್ಲಿ ಆಗುವ ರಕ್ತಸ್ರಾವದಿಂದಲೂ, ಬೆಳೆಯುತ್ತಿರುವ ಶಿಶುವಿಗೆ ಆಮ್ಲಜನಕದ ನ್ಯೂನತೆಯುಂಟಾಗಿ ಕೆಲವು ಬಗೆಯ ನರಗಳ ರೋಗಗಳು, ಕಣ್ಪರೆ, ಹಗಲು ಕುರುಡು ಕಾಣಿಸಿಕೊಳ್ಳ ಬಹುದು.

ಆದ್ದರಿಂದ ಗರ್ಭಿಣಿಯ ಅರೋಗ್ಯಕ್ಕೆ ಪ್ರಥಮ ಗಮನವನ್ನು ಕೊಡುವುದು ಬೆಳೆಯುತ್ತಿರುವ ಶಿಶುವಿನ ಆರೋಗ್ಯ ದೃಷ್ಟಿ ಯಿಂದ ಅಗತ್ಯ. ಅಲ್ಲದೆ ಗರ್ಭಿಣಿಯ ಆಹಾರದಲ್ಲಿ ಪೌಷ್ಟಿಕಾಂಶ ಗಳೂ, ಸಾಕಷ್ಟು ಪ್ರಮಾಣದಲ್ಲಿ ಜೀವಸತ್ವಗಳೂ ಇರುವಂತೆ ನೋಡಿಕೊಳ್ಳಬೇಕು. ಆಕೆಗೆ ಮಾನಸಿಕ ನೆಮ್ಮದಿಯನ್ನು ದೊರಕಿ ಸುವ ಕಡೆಗೆ ಗಮನ ಹರಿಸಬೇಕು. ಗರ್ಭಾವಸ್ಥೆಯಲ್ಲಿ ತಗಲುವ ರೋಗಗಳಿಗೆ ಮತ್ತು ಮೇಹವ್ಯಾಧಿಗಳಿಗೆ ಪರಿಣಿತರಿಂದ ಚಿಕಿತ್ಸೆ ನಡೆಸಬೇಕು. ಆಗಿಂದಾಗ್ಗೆ ಗರ್ಭಿಣಿಯ ಆರೋಗ್ಯವನ್ನು ವೈದ್ಯ ರಿಂದ ಪರೀಕ್ಷಿಸಿ ಸಲಹೆಯನ್ನು ಪಡೆಯಬೇಕು. ಹುಟ್ಟು ಕುರು ಡನ್ನು ತಡೆಗಟ್ಟುವ ಹಾದಿಯಲ್ಲಿ ತಾಯಿಯ ಅರೋಗ್ಯಕ್ಕೆ ಗಮನ ಕೊಡುವುದು ಪ್ರಥಮ ಹೆಜ್ಜೆಯೆಂದು ತಿಳಿಯಬೇಕು.

ಜನನ ಕಾಲದಲ್ಲಿ ಶಿಶುವಿಗೆ ಆಗುವ ಪೆಟ್ಟುಗಳು ಮತ್ತು ತಗಲುವ ರೋಗಗಳು.

ಜನನ ಕ್ರಿಯೆಯು ಪ್ರಕೃತಿಯ ನೈಜಕ್ರಿಯೆಯೆನಿಸಿದರೂ, ಜನಿಸುವ ಶಿಶುವು ಪ್ರಪಂಚಕ್ಕೆ ಕಾಲಿಡುವಾಗ ಮತ್ತು ಕಾಲಿಟ್ಟ ನಂತರವೂ ಕೆಲವು ಕಂಟಕಗಳನ್ನು ಎದುರಿಸಬೇಕಾಗುವುದು.

ಕಣ್ಣೊಳಗಿನ ಮಸೂರದ ಹಿಂಬದಿಯಲ್ಲಿ ಕಾಣಿಸುವ ಬಿಳ್ಪರೆ : ಇದು ದಿನತುಂಬದೆ ಹುಟ್ಟುವ ಮತ್ತು 3-30 ಪೌಂಡಿಗೂ ಕಮ್ಮಿ ತೂಗುವ ಮಕ್ಕಳಲ್ಲಿ ಕಾಣಿಸಿಕೊಳ್ಳುವುದು. ಅಮೆರಿಕೆಯಲ್ಲಿ ಮಕ್ಕಳಲ್ಲಿನ ಕುರುಡಿಗೆ ಇದು ಅತಿ ಮುಖ್ಯ ಕಾರಣವೆನಿಸಿದೆ. ಮಗುವು ಹುಟ್ಟಿದ ಕೆಲವು ವಾರಗಳಲ್ಲಿ ಕಣ್ಣೊಳಗಿನ ದೃಷ್ಟಿಪಟಲದ ಅಂಚಿನಲ್ಲಿ ಒಂದು ಬಗೆಯ ಬೂದು ಬಣ್ಣದ ಪರೆಯು ಕಾಣಿಸಿಕೊಳ್ಳುವುದು. ಇದು ಹೆಚ್ಚುತ್ತಾ ಹೋಗಿ, ಕೊನೆಗೆ ದೃಷ್ಟಿಪಟಲದ ಸ್ಥಾನ ಪಲ್ಲಟದಿಂದ ಪೂರ್ಣ ದೃಷ್ಟಿನಾಶವಾಗುವುದು. ಈ ಸ್ಥಿತಿಗೆ ಅಮ್ಲಜನಕದ ಹೆಚ್ಚಳ ಇಲ್ಲವೆ ನ್ಯೂನತೆ ಕಾರಣವೆನ್ನುವರು. ಮಗುವು ಹುಟ್ಟಿದ ಎರಡು ತಿಂಗಳಿಂದ ಐದು ತಿಂಗಳ ಒಳಗೆ ಸರಿಯಾಗಿ ಎಲ್ಲ ಮಕ್ಕಳಂತೆ ನೋಡಲಾಗದುದರಿಂದ ತಾಯಂದಿರು ಗಾಬರಿಯಾಗಿ ಕಣ್ಣೊಳಗೆ ಏನೋ ಬೆಳ್ಳಗೆ ಕಾಣುವುದೆಂದೂ, ಮಗುವು ಸರಿಯಾಗಿ ನೋಡುವುದಿಲ್ಲವೆಂದೂ ಸಲಹೆಗಾಗಿ ಬರುವುದುಂಟು. ಮಗುವಿನ ಕಣ್ಣುಗಳನ್ನು ಪರೀಕ್ಷಿಸುವಲ್ಲಿ ಒಂದು ಕಣ್ಣು ಅತಿ ಚಿಕ್ಕದಾಗಿಯೂ, ಇನ್ನೊಂದು ಸರಿಯಾಗಿಯೂ ಕಾಣುವುದು. ದೃಷ್ಟಿ ಪೂರ್ಣ ನಾಶವಾಗಿರುವುದರಿಂದ ಏನನ್ನೂ ಮಾಡಲಾಗುವುದಿಲ್ಲ. ಇದು ವಾಸಿ ಮಾಡಲಾಗದ ಕುರುಡು. ಅದುದರಿಂದ ತಾಯಿಯ ಆರೋಗ್ಯಕ್ಕೂ, ಭ್ರೂಣದ ಸರಿಯಾದ ಬೆಳವಣಿಗೆಗೂ ಸೂಕ್ತಗಮನ ಕೊಡುವುದರಿಂದ ಈ

ಸ್ಥಿತಿಯು ತಲೆದೋರದಂತೆ ಮಾಡಲು ಸಾಧ್ಯ. ಈ ಸ್ಥಿತಿಯುನ್ನು ಹೊತ್ತು ಬೆಳೆದ ಮಗುವನ್ನು ಕಾಲಕ್ರಮೇಣ ಕೆಲಸಕ್ಕೆ ಸರಿಹೊಂದಿಸುವ ಶಾಖೆಯ ಮೇಲ್ವಿಚಾರಣೆಯಲ್ಲಿ ಬೆಳೆಸಬೇಕಾಗುವುದು.

ಜನನ ಕಾಲದಲ್ಲಿ ಆಗುವ ಪೆಟ್ಟುಗಳು : ಹೆರಿಗೆಯು ಸುಸೂತ್ರವಾಗಿ ಆಗದೆ, ಮಗುವು ಬರಲು ಕ್ಲಿಷ್ಟವೆನಿಸಿದಾಗ forceps ಸಾಧನವನ್ನು ತೂರಿಸಿ ಮಗುವನ್ನು ಎಳೆಯುವುದುಂಟು. ಹೀಗೆ ಮಗುವನ್ನು ಎಳೆಯುವಾಗ ಮಗುವಿನ ಕಣ್ಣು ರೆಪ್ಪೆಗಳಿಗೆ ಪೆಟ್ಟು ತಗಲಬಹುದು. ಕಣ್ಣುಗುಡ್ಡೆಯನ್ನು ಹೊರಗಡೆ ತಿರುಗಿಸುವ ಮಾಂಸಖಂಡದ ನರಕ್ಕೆ ಜಖಂ ಆಗಿ ಮೆಳ್ಳಗಣ್ಣು ತೋರಬಹುದು. ಕಣ್ಣುಗುಡ್ಡೆಯ ಹಿಂಬದಿಯಲ್ಲಿ ರಕ್ತಸ್ರಾವವಾಗಿ ಕಣ್ಣುಗುಡ್ಡೆಯು ಗೂಡಿಂದ ಹೊರಬಂದಂತೆ ಕಾಣಬಹುದು. ಇಲ್ಲವೆ ಕಣ್ಣುಗುಡ್ಡೆಯು ಬಿರಿಯಬಹುದು. ಶೇಕಡ 12 ರಷ್ಟು ಶಿಶುಗಳು ದೃಷ್ಟಿಪಟಲದಲ್ಲಿ ರಕ್ತಸ್ರಾವವನ್ನು ತೋರುವುವು. ಕರಿಯ ಗುಡ್ಡೆಗೂ ಪೆಟ್ಟುತಗುಲಿ ಬಿರಿಯಬಹುದು. ಆದ್ದರಿಂದ ಹೆರಿಗೆಯ ಸಮಯದಲ್ಲಿ ಸುಶಿಕ್ಷಿತ ವೈದ್ಯರ ನೆರವು ಮತ್ತು ಎಚ್ಚರ ಅಗತ್ಯ.

# 3. ಶೈಶವಾವಸ್ಥೆಯಲ್ಲಿ ಕುರುಡನ್ನುಂಟು ಮಾಡುವ ರೋಗಗಳು

## 1. ಹುಟ್ಟುಶಿಶು ಕೀವುಗಣ್ಣು (Ophthalmia Neo natorum)

ಗುಪ್ತವಾಗಿ ಹರಡುತ್ತಿರುವ ಮೇಹವ್ಯಾಧಿಗಳ ಫಲವಾಗಿ ಹುಟ್ಟು ಶಿಶುಗಳಲ್ಲಿ ಕಾಣಿಸಿಕೊಳ್ಳುವ ಕೀವುಗಣ್ಣು ಶಿಶುಗಳ ಕುರುಡಿಗೆ ಕಾರಣವಾಗಿರುತ್ತದೆ. ಇದು ಹೆರಿಗೆಯ ಸಮಯದಲ್ಲಿ ಸರಿಯಾದ ಸೂಲಗಿತ್ತಿಯು ದೊರಕದಿದ್ದಲ್ಲಿ, ಇಲ್ಲವೆ ತಾಯಿಗೆ ಗೊನೋರಿಯಾ ರೋಗವಿದ್ದಲ್ಲಿ ಜನನ ದ್ವಾರದಲ್ಲಿ ಶಿಶುವು ಬರುವಾಗ ಶಿಶುವಿನ ಕಣ್ಣಿಗೆ ತಾಯಿಯ ರೋಗದ ಸೋಂಕು ಸೋಕಿ ಕೀವುಗಣ್ಣು ಹುಟ್ಟಿದ ಎರಡು ಮೂರು ದಿನಗಳಲ್ಲಿ ಕಾಣಿಸಿಕೊಳ್ಳುವುದು. ಹೆರಿಗೆ ಮಾಡುವ ಸೂಲಗಿತ್ತಿಗೂ ಈ ಮೇಹ ರೋಗವಿದ್ದಲ್ಲಿ ಆಕೆಯ ಅವಿವೇಕದಿಂದಲೂ ಅಜಾಗರೂಕತೆಯಿಂದಲೂ ಈ ರೋಗ ಶಿಶುವಿಗೆ ತಗಲುವುದುಂಟು. ಈ ರೋಗ ತಡೆಗಟ್ಟಬಹುದಾದ ರೋಗ. ಅಲ್ಲದೆ ಈ ರೋಗ ಕಾಣಿಸಿಕೊಂಡ ಒಡನೆಯೇ ಸಕಾಲದಲ್ಲಿ ಚಿಕಿತ್ಸೆ ನಡೆಸಿದಲ್ಲಿ ಶಿಶುವು ಕುರುಡನ್ನು ಅಪ್ಪಬೇಕಾಗಿಲ್ಲ.

ಈ ರೋಗವು ಹಿಂದೆ ಮಕ್ಕಳ ಕುರುಡಿಗೆ ಬಹು ಮುಖ್ಯವಾದ ಕಾರಣವಾಗಿತ್ತು. ಯೂರೋಪಿನಲ್ಲಿ 300,000 ಕುರುಡರಲ್ಲಿ 3000 ಮಂದಿಯ ಕುರುಡಿಗೆ ಹುಟ್ಟು ಕೀವುಗಣ್ಣು ಕಾರಣವಾಗಿತ್ತು. ಕುರುಡರ ಶಾಲೆಯಲ್ಲಿರುವ ಮಕ್ಕಳ ಕುರುಡಿಗೆ ಈ ರೋಗವು ಶೇಕಡ 30 ರಿಂದ 60 ರಷ್ಟು ಕಾರಣವಾಗಿತ್ತೆಂದು ತಿಳಿದು ಬಂದಿರುತ್ತದೆ. ಇಂಗ್ಲೆಂಡಿನಲ್ಲಿ 1954 ರಿಂದ

ಹುಟ್ಟುಶಿಶು ಕೀವುಗಣ್ಣು ಒಂದೂ ವರದಿಯಾಗಿಲ್ಲವಂತೆ. "ಇಲಿನಾಯಿಸ್" ಸಂಸ್ಥಾನದಲ್ಲಿ 1944 ರಿಂದ ಈಚೆಗೆ ಈ ರೋಗದಿಂದ ಕುರುಡು ಒಂದೂ ವರದಿಯಾಗಿಲ್ಲ. ಮೈಸೂರಿನ ಕುರುಡರ ಶಾಲೆಯ 63 ಮಕ್ಕಳಲ್ಲಿ ಐದು ಮಕ್ಕಳು ಹುಟ್ಟು ಕೀವುಗಣ್ಣಿಂದ ಕುರುಡಾಗಿದ್ದರು. ಸಾರ್ವಜನಿಕ ಆರೋಗ್ಯ ಶಾಖೆಯು ಸರಿಯಾಗಿ ರೂಪಿತವಾಗದಿರುವ ಊರುಗಳಲ್ಲಿ ಈ ರೋಗವು ಶೇಕಡ 20 ರಷ್ಟು ಕುರುಡಿಗೆ ಕಾರಣವಾಗಿದೆ. 1876 ರಲ್ಲಿ ಜರ್ಮನಿಯಲ್ಲಿ ಮಕ್ಕಳ ಕುರುಡಿಗೆ ಹುಟ್ಟು ಕೀವು ಗಣ್ಣು ಶೇಕಡ 30 ರಷ್ಟು ಕಾರಣವಾಗಿತ್ತು.

ಈ ರೋಗದ ಕಾರಣವು ಮೇಹರೋಗಗಳಲ್ಲೊಂದಾದ 'ಗೊನೊರಿಯಾ' ಎಂದು ತಿಳಿದಿದೆ. ಶಿಶುವು ಜನಿಸಿದಾಗ, ತಾಯಿಗೆ ಈ ರೋಗವಿದ್ದಲ್ಲಿ ಶಿಶುವು ಈ ರೋಗಕ್ಕೆ ಬಲಿಯಾಗುವುದು. ಜನನ ದ್ವಾರದ ಕಲ್ಮಷದಲ್ಲಿ ಈ ರೋಗದ ರೋಗಾಣುಗಳು ಇರುವುದರಿಂದ ಕಲ್ಮಷವು ಶಿಶುವಿನ ಕಣ್ಣಿಗೆ ಅಂಟಿ ಜನಿಸಿದ ಒಂದೆರಡು ದಿನಗಳಲ್ಲಿಯೇ ಕಾಣಿಸಿಕೊಳ್ಳುವುದು. ಜನಿಸಿದ ನಾಲ್ಕು ದಿನಗಳ ಮೇಲೆ ರೋಗ ಕಂಡಲ್ಲಿ ರೋಗದ ಸೋಂಕು ಶಿಶುವಿಗೆ ಹುಟ್ಟಿದ ಮೇಲೆ ಸೋಂಕಿದೆ ಎಂದು ತಿಳಿಯಬೇಕು. ಈ ರೋಗವು ಎರಡು ಕಣ್ಣುಗಳಿಗೂ ತಗಲುವುದು. ಗೊನೋರಿಯಾವು ಹುಟ್ಟು ಕೀವುಗಣ್ಣಿಗೆ ಶೇಕಡ 27–30 ರಷ್ಟು ಮಾತ್ರ ಕಾರಣವಾಗಿರುತ್ತದೆ. ಬ್ಯಾಕ್ಟೀರಿಯಾ ಗುಂಪಿಗೆ ಸೇರಿದ ದ್ರಾಕ್ಷಿಯಂತಿರುವ ಗುಂಡಾಣುಗಳು ಶೇಕಡ 35 ರಷ್ಟು ಕಾರಣವಾಗಿರುತ್ತವೆ. ಅತಿ ಸೂಕ್ಷ್ಮಾಣುಜಾತಿಗೆ ಸೇರಿದ 'ವೈರಸ್ಸು' ಗಳು ಶೇಕಡ 10 ರಷ್ಟು ಕಾರಣಗಳಾಗಿರುತ್ತವೆ. ಶಿಶುವು ಜನಿಸಿದ ನಂತರ ಕಲ್ಮಷ ಬೆರೆತ ಬಟ್ಟೆ, ಟವೆಲ್, ಸ್ಪಂಜುಗಳು ಅಥವಾ ದಾದಿಯ ಕೊಳೆಯ ಬೆರಳುಗಳಿಂದ ಸೋಂಕು ಮಗುವಿನ ಕಣ್ಣಿಗೆ ಸೋಂಕಬಹುದು.

ರೋಗದ ಲಕ್ಷಣಗಳು : ಸಾಧಾರಣವಾಗಿ ರೋಗವು ಶಿಶು ಜನಿಸಿದ ಎರಡು ಅಥವಾ ಮೂರನೆಯ ದಿನ ಕಾಣಿಸಿಕೊಳ್ಳು ವುದು. ಕೆಲವು ಘಂಟೆಗಳೊಳಗೆ ರೆಪ್ಪೆಗಳು ಕೆಂಪಾಗಿ ಊದಿಕೊಳ್ಳು ವುವು. ಕಣ್ಣಿಂದ ನೀರು ಸುರಿಯಲು ಮೊದಲಾಗುವುದು. ಶಿಶುವು ಜನಿಸಿದ ಮೊದಲ ವಾರದಲ್ಲಿ ಶಿಶುವಿನ ಕಣ್ಣಿಂದ ನೀರು ಸುರಿ ದರೂ ರೋಗ ತಗುಲಿದೆ ಎಂದು ಅನುಮಾನಿಸಬೇಕು. ಏಕೆಂದರೆ ಮಗುವಿನ ಕಣ್ಣಲ್ಲಿ ಹುಟ್ಟಿದ ತತ್‌ಕ್ಷಣ ಕಣ್ಣೀರು ಉತ್ಪತ್ತಿಯಾಗು ವುದಿಲ್ಲ. ರೋಗ ಬೆಳೆದಂತೆ ಕ್ರಮೇಣ ಕಣ್ಣಲ್ಲಿ ಹಳದಿ ಬಣ್ಣದ ಕೀವು ಸುರಿಯಲು ಮೊದಲಾಗುವುದು. ಕಣ್ಣು ಬಿಡಿಸಲು ಯತ್ನಿ ಸುವಾಗ ಕೀವು ರಭಸದಿಂದ ಹತ್ತಿರ ಇರುವವರ ಕಣ್ಣಿಗೆ ಸಿಡಿ ಯುವುದುಂಟು. ಎಚ್ಚರಿಕೆ ವಹಿಸದಿದ್ದಲ್ಲಿ ಕೀವು ಇನ್ನೊಬ್ಬರ ಕಣ್ಣಿಗೆ ಸಿಡಿದು ರೋಗವು ಸುಲಭವಾಗಿ ಹರಡುವುದು. ಶಿಶುವಿನ ಕಣ್ಣು ಒರೆಸಿದ ಕೈಯಿಂದಾಗಲೀ ಇಲ್ಲವೇ ಕೀವಿಂದ ಮಲಿನವಾದ ಬಟ್ಟೆಯನ್ನು ಉಪಯೋಗಿಸುವುದರಿಂದಾಗಲೀ, ತಾಯಿಯೂ ಹತ್ತಿರ ಇರುವವರೂ ಈ ರೋಗವನ್ನು ಅತಿ ಸುಲಭವಾಗಿ ಪಡೆಯಬಹುದು.

ಕಣ್ಣನ್ನು ಮುಚ್ಚಿರುವ ಸಂಧಿಪರೆಯು ಉದ್ರೇಕಗೊಂಡು ಕೆಂಪಾಗಿ ಊದಿಕೊಳ್ಳುವುದು ಮತ್ತು ಕರಿಯ ಗುಡ್ಡೆಯ ಸುತ್ತ ಬೆಲೂನಿನಂತೆ ಉಬ್ಬುವುದು. ಸಕಾಲದಲ್ಲಿ ಚಿಕಿತ್ಸೆ ದೊರಕದಿದ್ದಲ್ಲಿ ಕರಿಯ ಗುಡ್ಡು ಕೀತು, ವ್ರಣವಾಗಿ ಬಿರಿದು, ದ್ರಾಕ್ಷಿಗಣ್ಣಾಗಿ ಕುರುಡಿನಲ್ಲಿ ಕೊನೆಯಾಗುವುದು.

ಈ ರೋಗವು ಶಿಶುವಿನಲ್ಲಿ ಕಂಡ ತತ್‌ಕ್ಷಣವೇ ನೇತ್ರ ಚಿಕಿತ್ಸಕರ ಸಲಹೆ ಪಡೆದು ಚಿಕಿತ್ಸೆ ಹೊಂದಬೇಕು. ಉದಾಸೀನ ಮಾಡಿದಲ್ಲಿ ಏನೂ ತಿಳಿಯದ ಮಗುವು ಆಜನ್ಮ ಕುರುಡನ್ನು ಅನುಭವಿಸ

ಬೇಕಾಗುವುದು. ಈ ರೋಗದಿಂದ ನರಳುವ ತಾಯಿಯು ಗರ್ಭ ವತಿಯಾಗಿದ್ದಲ್ಲಿ ಗರ್ಭಾವಸ್ಥೆಯಲ್ಲೇ ವೈದ್ಯರಿಂದ ಚಿಕಿತ್ಸೆ ಪಡೆಯ ಬೇಕು. ಜನನ ಕಾಲದಲ್ಲಿ ಸರಿಯಾದ ತರಬೇತಾಗಿರುವ ಸೂಲ ಗಿತ್ತಿಯ ಸಹಾಯವನ್ನು ಪಡೆಯಬೇಕು.

ಶಿಶುವು ಜನಿಸಿದ ನಂತರ ಶಿಶುವಿನ ಕಣ್ಣುಗಳನ್ನು ಶುಭ್ರ ಹತ್ತಿಯ ಚೂರಿನಿಂದ ಶುಭ್ರ ನೀರಿನಿಂದ ತೊಳೆದು ಕಣ್ಣಿನೊಳಕ್ಕೆ 1% ಸಿಲ್ವರ್ ನೈಟ್ರೇಟ್ ತೊಟ್ಟುಗಳನ್ನು ಹಾಕುವುದರಿಂದ ಈ ರೋಗವನ್ನು ತಡೆಗಟ್ಟಬಹುದು. ಇದಕ್ಕೆ ಕ್ರೇಡರ ಕ್ರಮವೆನ್ನು ವರು. ಈ ಕ್ರೇಡರ ಕ್ರಮದಲ್ಲಿ ಕೆಲವು ನ್ಯೂನತೆಗಳು ಇವೆ. ಈ ತೊಟ್ಟುಗಳನ್ನು ಹಾಕುವ ಸೂಲಗಿತ್ತಿಯು ಕಣ್ಣುಗಳನ್ನು ತೊಳೆಯ ದೆಯೇ, ತೊಟ್ಟುಗಳನ್ನು ಹಾಕಿ ಎಲ್ಲವನ್ನು ಮಾಡಿರುವೆನೆಂದು ಸುಮ್ಮನಾಗಬಹುದು. ಈ ತೊಟ್ಟುಗಳನ್ನು ಹಾಕಿದ ಮೇಲೆ ಕಾಣಿಸಿಕೊಳ್ಳುವ ಕಣ್ಬೇನೆಯನ್ನು ತೊಟ್ಟುಗಳು ಹಾಕಿದಮೇಲೆ ಕಾಣ ಬಹುದಾದ ಸಾಧಾರಣ ಕಣ್ಬೇನೆಯೆಂದು ತಪ್ಪು ತಿಳಿಯಬಹುದು. ಕಣ್ಣು ಪಿಸುರು ಕಟ್ಟಿದರೂ ಸಾಧಾರಣವೆಂದು ವೈದ್ಯರಿಗೆ ತಿಳಿಸದೆ ಸೂಲಗಿತ್ತಿಯು ರೋಗದ ಆರಂಭವೆಂದು ತಿಳಿಯದೆ ಸುಮ್ಮ ನಾಗಬಹುದು.

ಸಿಲ್ವರ್ ನೈಟ್ರೇಟ್ ತೊಟ್ಟುಗಳಿಗೆ ಬದಲಾಗಿ ಬೇರೆ ತೊಟ್ಟು ಗಳನ್ನು ಹಾಕಿ ಕಣ್ಣುಗಳನ್ನು ಹಾಳುಮಾಡಿರುವ ಪ್ರಕರಣಗಳು ವರದಿಯಾಗಿವೆ. ಬಹಳ ಹಳೆಯ ಶೀಸೆಗಳಿಂದ ತೊಟ್ಟುಗಳನ್ನು ಹಾಕಿ ಕಣ್ಣು ಕಳೆದಿರುವುದೂ ಉಂಟು. ಆದರಿಂದ ಸಿಲ್ವರ್ ನೈಟ್ರೇಟ್ ತೊಟ್ಟುಗಳನ್ನು ದಾದಿಯ ವಶಕ್ಕೆ ಕೊಡುವುದು ಅಪಾಯಕಾರಿ ಮತ್ತು ಹಾನಿ ತರಬಹುದೆಂದು ಇತ್ತೀಚಿನ ಅಭಿ ಪ್ರಾಯವಾಗಿರುತ್ತದೆ. ಇತ್ತೀಚೆಗೆ ಪೆನಿಸಿಲಿನ್ ತೊಟ್ಟುಗಳನ್ನು

ಮತ್ತು ಮುಲಾಮುಗಳನ್ನು ಜನಿಸಿದ ಶಿಶುಗಳ ಕಣ್ಣಿಗೆ ಹಾಕುವ
ರೂಢಿಯು ಬಳಕೆಗೆ ಬರುತ್ತಿದೆ. ಇದು ಕ್ರೀಡರ ಕ್ರಮಕ್ಕಿಂತಲೂ
ಹೆಚ್ಚು ಕ್ಷೇಮವೆನ್ನಬಹುದು.

ಯಾವ ಶಿಶುವಾಗಲೀ 21 ದಿನಗಳೊಳಗೆ ಕಣ್ಣ್ಣೋಪಾದರೆ
ಇಲ್ಲವೆ ಪಿಸುರುಗಟ್ಟಿದರೆ ವೈದರ ಗಮನಕ್ಕೆ ಕೂಡಲೇ ತರ
ಬೇಕೆಂಬ ನಿಯಮವು ಪಾಶ್ಚಿಮಾತ್ಯ ದೇಶಗಳಲ್ಲಿ ಜಾರಿಯಲ್ಲಿರು
ತ್ತದೆ. ಈ ನಿಯಮವನ್ನು ಮೀರಿದವರನ್ನು ಅಪರಾಧಿಗಳೆಂದು
ಶಿಕ್ಷೆಗೆ ಗುರಿಪಡಿಸುತ್ತಾರೆ. ಈ ರೋಗದ ವಿಷಯದಲ್ಲಿ ನಮ್ಮ
ದೇಶದಲ್ಲಿ ಈ ಬಗೆಯ ನಿಯಮಗಳಾವುವೂ ಜಾರಿಯಲ್ಲಿ ಇಲ್ಲ.
ಅಲ್ಲದೆ ಈ ರೋಗದ ವಿಚಾರವಾಗಿ ನಮ್ಮ ಜನರಲ್ಲಿ ವಿದ್ಯಾ
ಪ್ರಚಾರವೂ ಸಾಕಷ್ಟು ನಡೆದಿಲ್ಲ. ಶಿಶುಗಳಲ್ಲಿ ಕಾಣಿಸಿಕೊಳ್ಳುವ
ಈ ರೋಗವನ್ನು ಸಾಧಾರಣ ಕಣ್ಣುನೋವೆಂದು ತಿಳಿದು ಅಸಡ್ಡೆ
ಮಾಡಿ ಮಿಂಚಿಹೋದ ಮೇಲೆ ಚಿಕಿತ್ಸೆಗೆ ಬರುವುದು ನಮ್ಮಲ್ಲಿ
ವಾಡಿಕೆಯಾಗಿದೆ. ಅದರಿಂದ ನಮ್ಮ ದೇಶದಲ್ಲೂ ಈ ರೋಗದ
ವಿಷಯದಲ್ಲಿ ಹೆಚ್ಚು ವಿದ್ಯಾ ಪ್ರಚಾರವೂ ಅಗತ್ಯ ಮತ್ತು ರೋಗ
ಕಂಡಕೂಡಲೇ ತಿಳಿಸಬೇಕೆಂಬುವ ನಿಯಮವನ್ನು ಕೂಡಲೇ ಆಚ
ರಣೆಗೆ ತರುವುದು ಆವಶ್ಯಕ. ಸರ್ವವಿಧದಿಂದಲೂ ಮೇಹರೋಗ
ಗಳ ಹರಡುವಿಕೆ ಮತ್ತು ಹತೋಟಿಯ ವಿಚಾರದಲ್ಲಿ ಸಾರ್ವಜನಿಕ
ಆರೋಗ್ಯಶಾಖೆ ಮತ್ತು ಸರ್ಕಾರವು ಸೂಕ್ತ ಕ್ರಮಗಳನ್ನು
ಕೈಗೊಳ್ಳಬೇಕು. ಹೆರಿಗೆಯ ಸಮಯದಲ್ಲಿ ಸುಶಿಕ್ಷಿತಳಾದ ಸೂಲ
ಗಿತ್ತಿಯ ನೆರವು ದೊರಕುವಂತೆ ಮಾಡಬೇಕು.

ರೋಗ ತಗಲಿದ ಶಿಶುವನ್ನು ಪ್ರತ್ಯೇಕಿಸಿ ನೇತ್ರ ಚಿಕಿತ್ಸಕರಿಂದ
ಸಕಾಲದಲ್ಲಿ ಚಿಕಿತ್ಸೆ ನಡೆಸಬೇಕು. ಪೆನಿಸಿಲಿನ್ ತೊಟ್ಟುಗಳು ಈ
ರೋಗದಲ್ಲಿ ಫಲಕಾರಿಯೆಂದು ಕಂಡುಬಂದಿದೆ. ಶಿಶುವಿನ ಆರೋ

ಗ್ಯಕ್ಕೆ ಗಮನ ಕೊಡಬೇಕು. ಶಿಶುವಿನ ಚಿಕಿತ್ಸೆ ನಡೆಸುವಾಗ ವೈದ್ಯರೂ ದಾದಿಯರೂ ರಕ್ಷಣಾ ಕನ್ನಡಕಗಳನ್ನು ಹಾಕಿಕೊಳ್ಳ ಬೇಕು. ಚಿಕಿತ್ಸೆಗೆ ಮೊದಲು ಕೈಗಳನ್ನು ಸೋಪು ಮತ್ತು ಶುಭ್ರ ನೀರಿನಿಂದ ತೊಳೆದುಕೊಳ್ಳಬೇಕು. ಕಣ್ಣುಗಳನ್ನು ಕೊಳೆ ಬೆರಳು ಗಳಿಂದ ಎಂದಿಗೂ ಒರೆಸಿಕೊಳ್ಳಕೂಡದು. ಆಕಸ್ಮಾತ್ ಕಣ್ಣೊಳಕ್ಕೆ ಕೀವು ಏನಾದರೂ ಸಿಡಿದಲ್ಲಿ, ಕೂಡಲೇ ಕಣ್ಣುಗಳನ್ನು ಶುಭ್ರ ನೀರಿಂದ ತೊಳೆದುಕೊಂಡು ನೇತ್ರ ವೈದ್ಯರನ್ನು ಕಂಡು ಚಿಕಿತ್ಸೆ ಪಡೆಯಬೇಕು.

## 2. ಹುಟ್ಟುಕಣ್ಪರೆ (Congenital cataract )

ಸಾಧಾರಣವಾಗಿ ಕಣ್ಪರೆಯು ವಯಸ್ಸಾದವರಲ್ಲೂ ಮತ್ತು ಮುದಿ ವಯಸ್ಸಿನವರಲ್ಲೂ ಕಾಣಿಸಿಕೊಳ್ಳುವುದು. ಎಷ್ಟೋ ಮಂದಿಗೆ ಕಣ್ಪರೆಯು ಹುಟ್ಟುವಾಗಲೂ ಮತ್ತು ಮಕ್ಕಳಲ್ಲೂ ಕಾಣಿಸಿಕೊಳ್ಳಬಹುದೆಂಬ ಅಂಶವು ತಿಳಿದಿರುವುದಿಲ್ಲ. ಇದು ಮಗುವು ಜನಿಸಿದಾಗಲೇ ಇದ್ದಿರಬಹುದು ಇಲ್ಲವೆ ಮಗು ಬೆಳೆ ಯುವ ಹಂತದಲ್ಲಿ ಮಸೂರದಲ್ಲಿನ ಚಯಾಪಚಯ ಕ್ರಿಯೆಗಳಲ್ಲಿ ಬದಲಾವಣೆಗಳಾಗಿ ಕಣ್ಪರೆ ಕಾಣಿಸಿಕೊಳ್ಳಬಹುದು. ಜೊತೆಗೆ ಅನು ವಂಶೀಯ ತಳಹದಿಯೂ ಇದ್ದಿರಬಹುದು. ಶಿಶುವು ಗರ್ಭದಲ್ಲಿ ಬೆಳೆಯುತ್ತಿರುವಾಗ, ತಾಯಿಯ ಆರೋಗ್ಯ ತಪ್ಪಿ ರೋಗ ತಗುಲಿ ದಾಗ ಕಣ್ಣೊಳಗಿನ ಮಸೂರದಲ್ಲಿ ಬದಲಾವಣೆಗಳಾಗಿ ಕಣ್ಪರೆ ಬರುವುದು. ಗರ್ಭಾವಸ್ಥೆಯಲ್ಲಿ ತಾಯಿಯ ಆಹಾರದಲ್ಲಿ ವ್ಯತ್ಯಾಸ ವಾದರೂ ಆಹಾರಾಂಶಗಳ ಅಭಾವದಿಂದ ಮಗುವಿನ ಕಣ್ಪರೆ ಕಾಣಿಸಿಕೊಳ್ಳಬಹುದು. ಗರ್ಭ ಧರಿಸಿದ ಎರಡು ಅಥವಾ ಮೂರು ತಿಂಗಳಲ್ಲಿ ತಾಯಿಗೆ ದಡಾರ ತಗುಲಿದಲ್ಲಿ ಮಗುವಿನಲ್ಲಿ ಕಣ್ಪರೆ ಬರುವುದುಂಟು. ಈ ದೃಷ್ಟಿಯಿಂದ ಅಮೆರಿಕೆಯಲ್ಲಿ ತಾಯಿಗೆ

ಗರ್ಭಾವಸ್ಥೆಯಲ್ಲಿ ಜರ್ಮನ್ ದಡಾರ ಬಂದಲ್ಲಿ ಗರ್ಭಪಾ
ಮಾಡುವುದು ನ್ಯಾಯಸಮ್ಮತವೆಂದು ಪರಿಗಣಿಸಲಾಗಿದೆ.

ಮಗುವು ಜನಿಸಿದ ಮೇಲೆ ಬೆಳೆಯುತ್ತಿರುವ ಹಂತದಲ್ಲಿ
ಪೌಷ್ಟಿಕಾಹಾರದ ಅಭಾವ. ಜೀವಸತ್ತ್ವಗಳ ಕೊರತೆಯಿಂದ
ಮಸೂರದಲ್ಲಿ ಬದಲಾವಣೆಗಳಾಗಿ ಕಣ್ಪೊರೆ ಬರುವುದುಂಟು. ಇದ
ಮಸೂರದ ಮುಂಭಾಗದ ಪ್ರದೇಶದಲ್ಲಿ ಪಾರದರ್ಶಕತೆಯು ನಶಿ
ಅದರ ಹೊರಮೈಯಲ್ಲಿ ಕಾಣಿಸಿಕೊಳ್ಳಬಹುದು. ಅಂತೆಯೆ
ಮಸೂರದ ಹಿಂಬದಿಯ ಪದರಗಳಲ್ಲಿ ಕಣ್ಪೊರೆ ಕಾಣಿಸಬಹುದು
ಕೆಲವು ಸಾರಿ ಮಸೂರದ ಮಧ್ಯಭಾಗದಲ್ಲಿ ಕಾಣಬಹುದು
ಒಮ್ಮೊಮ್ಮೆ ಕಣ್ಪೊರೆ ಮಗುವಿನಲ್ಲಿ ಕಂಡರೂ ಅದು ಬಲಿಯು
ಸ್ತಬ್ಧತೆಯ ಸ್ಥಿತಿಯನ್ನು ಮುಟ್ಟಿ ದೃಷ್ಟಿಗೆ ಅಡಚಣೆ ಮಾಡ
ದಂತೆಯೂ ಇರಬಹುದು.

3. ಪ್ರಾದೇಶಿಕ ಕಣ್ಪೊರೆ(Lamellar or Zonular cataract

ಗರ್ಭಾವಸ್ಥೆಯಲ್ಲಿ ಪೌಷ್ಟಿಕಾಹಾರದ ಕೊರತೆಯಿಂದ ಮಸೂ
ದಲ್ಲಿ ಬದಲಾವಣೆಗಳಾಗಿ ಪ್ರಾದೇಶಿಕ ಕಣ್ಪೊರೆ ಕಾಣಿಸಿಕೊಳ್ಳುವುದು
ಇದಕ್ಕೆ ಜೀವಸತ್ವ 'ಡಿ' ಅಭಾವವು ಕಾರಣವೆಂದು ಹೇಳಲಾಗಿದೆ
ಕೋರೆ ಮತ್ತು ಸೀಳುವ ಹಲ್ಲುಗಳ ಹೊರಮೈಯಲ್ಲಿರುವ ಎನ
ಮಲ್‌ನ ಬೆಳವಣಿಗೆಯು ಸಮರ್ಪಕವಾಗಿರುವುದಿಲ್ಲ. ಮಧ
ಮಧ್ಯೆ ಮಸೂರದಲ್ಲಿನ ಪದರಗಳ ಪಾರದರ್ಶಕತೆಯು ಸ
ಯಾದ ಬೆಳವಣಿಗೆಯನ್ನು ಸೂಚಿಸುತ್ತದೆ. ಪ್ರಬಲ ಜನ್ಮಬಿಂದ
ವಿನ ಅನುವಂಶೀಯ ತಳಹದಿಯೂ ಇದೆ ಎನ್ನುವರು. ಇದ
ಜೊತೆಯಲ್ಲಿ ರಿಕೆಟ್ಸ್ ರೋಗದ ಚಿನ್ಹೆಗಳು ಬೆರೆತಿರಬಹುದು
ಇದು ಸಾಧಾರಣವಾಗಿ ಎಳೆಯ ವಯಸ್ಸಿನ ಮಕ್ಕಳಲ್ಲಿ ಕಾಣಿ

ಕೊಳ್ಳುವುದು. ಎರಡು ಕಣ್ಣುಗಳಲ್ಲೂ ಕಣ್ಪೊರೆಯು ಕಾಣಿಸಿಕೊಳ್ಳುವುದು. ಮಸೂರದ ಹೊರವಲಯವು ಪಾರದರ್ಶಕತೆಯನ್ನು ಹೊಂದಿರುವುದು. ಕಣ್ಪೊರೆಯು ಬೂದು ಬಣ್ಣದ ತಟ್ಟೆಯನ್ನು ಹೋಲುವುದು. ಇದರ ಅಂಚಿನಿಂದ ಬಿಳಿಯ ಗೆರೆಗಳು ಗಾಲಿಯ ಚಕ್ರದಂತೆ ಹೊರಕ್ಕೆ ಚಾಚಿರುವುವು. ದೃಷ್ಟಿನಾಶವು ಕಣ್ಪೊರೆಯ ವ್ಯಾಪ್ತಿಯನ್ನು ಅವಲಂಬಿಸಿರುವುದು.

ತಾಯಿಯು ಮಗುವಿನ ದೃಷ್ಟಿ ಸರಿಯಿಲ್ಲೆಂದೂ, ಪದಾರ್ಥಗಳನ್ನು ಕಣ್ಣಿನ ಹತ್ತಿರ ಇಟ್ಟು ನೋಡುವುದೆಂತಲೂ, ಮಗುವಿಗೆ ಹತ್ತಿರ ದೃಷ್ಟಿ ಇದೆಯೆಂದು ಸಲಹೆಗಾಗಿ ಕರೆತರುವುದುಂಟು. ಮಕ್ಕಳಲ್ಲಿ ಒಮ್ಮೊಮ್ಮೆ ಎಳವು ಬರುವುದುಂಟು.

ನಿವಾರಣೆ: ತಾಯಿಯು ಗರ್ಭಿಣಿಯಾಗಿರುವಾಗ ಸಾಕಷ್ಟು ಪುಷ್ಟಿಯಿರುವ ಜೀವಸತ್ವ ಬೆರೆತ ಆಹಾರವನ್ನು ತೆಗೆದುಕೊಳ್ಳಬೇಕು. ಆಹಾರದಲ್ಲಿ ಕ್ಯಾಲ್ಸಿಯಂ ಮತ್ತು ಕಬ್ಬಿಣದ ಲವಣಗಳು ಸರಿಯಾದ ಪ್ರಮಾಣದಲ್ಲಿರಬೇಕು. ಬೆಳೆಯುತ್ತಿರುವ ಮಗುವಿಗೆಂದು ದಿನವೂ ತೆಗೆದುಕೊಳ್ಳುವ ಆಹಾರದ ಜೊತೆಗೆ ಒಂದು ಸೇರು ಹಾಲು, ಹಣ್ಣು ಹಂಪಲುಗಳು ಮತ್ತು ಹಸಿಯ ತರಕಾರಿಗಳನ್ನು ತೆಗೆದುಕೊಳ್ಳಬೇಕು. ಜರ್ಮನ್ ದಡಾರದ ಸೋಂಕಿನಿಂದ ಗರ್ಭಿಣಿಯು ದೂರವಿರಬೇಕು.

ಚಿಕಿತ್ಸೆ: ಶಸ್ತ್ರಚಿಕಿತ್ಸೆಯು ಮಗುವಿನ ದೃಷ್ಟಿಯನ್ನು ಅವಲಂಬಿಸಿರುತ್ತದೆ. ದೃಷ್ಟಿಯು 6/18 (ಅಂದರೆ ಸ್ನೆಲನ್ ಚಾರ್ಟಿನ ನಾಲ್ಕನೆಯ ಸಾಲನ್ನು ಗುರುತಿಸುವಂತಿದ್ದರೆ) ಇದ್ದಲ್ಲಿ ಶಸ್ತ್ರಚಿಕಿತ್ಸೆಯು ಅನವಶ್ಯಕ. ದೃಷ್ಟಿಯು 6/24 ಇಲ್ಲವೆ ಇದಕ್ಕಿಂತ ಕಡಿಮೆಯಿದ್ದಲ್ಲಿ ಶಸ್ತ್ರಚಿಕಿತ್ಸೆಯ ಅಗತ್ಯವಿದೆ. ಹಿಗ್ಗಿದ ಪಾಪೆಯಿಂದ

ದೃಷ್ಟಿಯು ಉತ್ತಮಗೊಂಡಲ್ಲಿ, ಮಸೂರದಲ್ಲಿನ ಬದಲಾವಣೆ ಗಳು ಸ್ಥಗಿತವಾಗಿದ್ದಲ್ಲಿ ದೃಷ್ಟಿಯನ್ನು ಉತ್ತಮಗೊಳಿಸಲು ಬೆಳಕಿನ ಕಿರಣಗಳ ಪ್ರಸರಣಕ್ಕೆ ಅನುಕೂಲಿಸುವಂತೆ ಕೆಳಗಿನ ಪಾಪೆಯ ಅಂಚಿನ ಛೇದನ ಚಿಕಿತ್ಸೆ ಮಾಡಬಹುದು. ದೃಷ್ಟಿಯು ಬಹಳ ಮಟ್ಟಿಗೆ ಕಮ್ಮಿಯಿದ್ದಲ್ಲಿ ಮಸೂರವನ್ನು ಸೂಜಿಯಿಂದ ಛೇದನ ಮಾಡಬೇಕಾಗುವುದು. ಸಾಧಾರಣವಾಗಿ ಮಗುವಿಗೆ ಒಂಬತ್ತು ತಿಂಗಳ ಒಳಗೆ ಶಸ್ತ್ರಚಿಕಿತ್ಸೆ ನಡೆಸುವುದಿಲ್ಲ. ಶಸ್ತ್ರಚಿಕಿತ್ಸೆ ಅಗತ್ಯವೇ ಇಲ್ಲವೇ ಎಂಬುದನ್ನು ನಿರ್ಧರಿಸುವ ಸ್ವಾತಂತ್ರ್ಯವನ್ನು ನೇತ್ರ ಚಿಕಿತ್ಸಕರಿಗೇ ಬಿಡಬೇಕು. ಒಮ್ಮೊಮ್ಮೆ ಮೂರು ನಾಲ್ಕು ವಾರಗಳ ನಂತರ ಪುನಃ ಶಸ್ತ್ರಚಿಕಿತ್ಸೆಯನ್ನು ನಡೆಸಬೇಕಾಗಿ ಬರಬಹುದು. ಶಸ್ತ್ರಚಿಕಿತ್ಸೆಯ ನಂತರ ಮಗುವು ಶಸ್ತ್ರಚಿಕಿತ್ಸೆ ನಡೆಸಿದ ಕಣ್ಣನ್ನು ಉಜ್ಜಿಕೊಳ್ಳದಂತೆ ನೋಡಿಕೊಳ್ಳಬೇಕು.

## 4. ಬಸವನ ಕಣ್ಣು (Buphthalmos)

ಇದು ಸಾಧಾರಣವಾಗಿ ಶಿಶುಗಳಲ್ಲಿ ಮತ್ತು ಎಳೆಯ ಮಕ್ಕಳಲ್ಲಿ ಕಾಣಿಸಿಕೊಳ್ಳುವುದು. ಈ ಸ್ಥಿತಿಯಲ್ಲಿ ಕಣ್ಣೊಳಗಿನ ಅಂತರ್ದ್ರವ ವನ್ನು ಶೋಧಿಸುವ ಜರಡಿಯಲ್ಲಿಯೇ ಹುಟ್ಟು ದೋಷವಿದೆ ಯೆಂದು ಹಲವರ ಅಭಿಪ್ರಾಯ. ಆದರಿಂದ ಅಂತರ್ದ್ರವದ ಪರಿ ಚಲನೆಗೆ ಅಡಚಣೆಯುಂಟಾಗುವುದರಿಂದ ಕಣ್ಣಿನಲ್ಲಿ ಅಂತರ್ದ್ರವದ ಒತ್ತಡವು ಹೆಚ್ಚುವುದು. ಇದರ ಪರಿಣಾಮವಾಗಿ ದೃಷ್ಟಿನರವು ಬಟ್ಟಲಂತೆ ಆಳವಾಗಿ ಕ್ಷಯಿಸುವುದು. ಕೊನೆಯಲ್ಲಿ ಕುರುಡುತನ ವುಂಟಾಗುವುದು.

ರೋಗದ ಲಕ್ಷಣಗಳು : ಕಣ್ಣೊಳಗಿನ ಅಂತರ್ದ್ರವದ ಒತ್ತಡವ ಹೆಚ್ಚಿಸಿದ ಕಣ್ಣುಗುಡ್ಡೆಯ ಮುಂಭಾಗವು ಉಬ್ಬಿಕೊಂಡು,

ಕರಿಯ ಗುಡ್ಡೆಯೂ ಉಬ್ಬಿ ಅಗಲವಾದಂತೆ ಕಾಣುವುದು. ಅದ ರಿಂದ ಕಣ್ಣಿನ ಮುಂಭಾಗದ ಕೋಣೆಯು ಆಳವಾಗಿರುವುದು. ಜೊತೆಗೆ ಹತ್ತಿರ ದೃಷ್ಟಿಯ ದೋಷ ಬೆರೆತಿರುವುದು. ಕರಿಯ ಗುಡ್ಡೆಯ ಪದರಗಳ ಮಧ್ಯೆ ನೀರು ತುಂಬಿರುವುದರಿಂದ ಕರಿಯ ಗುಡ್ಡೆಯೂ ಪಾರದರ್ಶಕತೆಯನ್ನು ಕಳೆದುಕೊಂಡು, ಕರಿಯ ಗುಡ್ಡೆಯ ಮೇಲೆ ನೀರಿನ ಆವಿ ಕವಿದಂತೆ ತೋರುವುದು. ಕರಿಯ ಗುಡ್ಡೆಯ ಸುತ್ತ ಕೆಂಪು, ಕಣ್ಣೊಳಗೆ ನೋವು, ನೀರು ಸುರಿಯು ವುದು ಮತ್ತು ವಮನ ಈ ರೋಗದ ಇತರ ಲಕ್ಷಣಗಳು. ಮಗುವು ಬೆಳಕನ್ನು ನೋಡಲಾಗದ ಬೆಳಕಿನ ಭೀತಿಯನ್ನು ತೋರು ವುದು. ಇದು ರೋಗದ ಮೊದಲನೆಯ ಚಿಹ್ನೆಯಾಗಿರಬಹುದು. ದೂರಕ್ಕೆ ತಕ್ಕಂತೆ ನೋಡಲು ಹೊಂದಿಸತಕ್ಕ ಶಕ್ತಿಯು ಕ್ಷೀಣಿ ಸುವುದರಿಂದ ಮಗುವು ಓದುವಾಗ ಬಳಲಿಕೆಯನ್ನು ತೋರು ವುದು. ಕಣ್ಣೊಳಗೆ ಪಾಪೆಯ ಪರೆಯು ಶಿಥಿಲತೆಯನ್ನು ತೋರು ವುದಲ್ಲದೆ, ಮೇಲೆ, ಕೆಳಗೆ, ಪಕಕ್ಕೆ ಕಣ್ಣುಗುಡ್ಡೆಯನ್ನು ತಿರುಗಿಸಿ ದಾಗ ನಡುಕವನ್ನು ಪ್ರದರ್ಶಿಸುವುದು. ಕರಿಯ ಗುಡ್ಡೆಯ ಮೇಲೆ ಬಿಳಿಯ ಅಥವಾ ಬೂದು ಬಣ್ಣದ ಗೆರೆಗಳು ಇರಬಹುದು. ಎರಡು ಕಣ್ಣುಗಳು ಈ ಸ್ಥಿತಿಯನ್ನು ಹೊತ್ತಿರಬಹುದು.

ಚಿಕಿತ್ಸೆ : ಮಗುವಿನ ಕಣ್ಣಲ್ಲಿ ನೀರು ಸುರಿಯುವುದು, ಬೆಳಕಿನ ಭೀತಿ, ಓದುವಾಗ ಬಳಲಿಕೆ, ಕಣ್ಗೆಂಪು, ನೋವು ಕಂಡಕೂಡಲೇ ನೇತ್ರ ಚಿಕಿತ್ಸಕರ ಸಲಹೆ ಪಡೆಯಬೇಕು. ಈ ಸ್ಥಿತಿಯನ್ನು ಆದಷ್ಟು ಶಸ್ತ್ರಚಿಕಿತ್ಸೆಯಿಂದ ಅಂದರೆ ಒಂದು ಬಗೆಯ ಕೃತಕ ಜರಡೆಯನ್ನು ನಿರ್ಮಿಸುವುದರಿಂದ ಸ್ವಲ್ಪಮಟ್ಟಿಗೆ ಸರಿಪಡಿಸ ಬಹುದು. ಅಂತು ಈ ಸ್ಥಿತಿಯು ದೃಷ್ಟಿಯನ್ನು ಉತ್ತಮ ಪಡಿಸುವ ದೃಷ್ಟಿಯಿಂದ ಆಶಾದಾಯಕವಾಗಿಲ್ಲ.

## 5. ಮಕ್ಕಳಲ್ಲಿ ಬಿಳಿಯ ಪಾಪೆ (White pupil)

ತಾಯಂದಿರು ಮಕ್ಕಳ ದೃಷ್ಟಿಯು ಸರಿಯಾಗಿಲ್ಲವೆಂದೂ ಪಾಪೆಯ ಪ್ರದೇಶದಲ್ಲಿ ಏನೋ ಬೆಳ್ಳಗೆ ಕಾಣುವುದೆಂದೂ ಸಲಹೆಗಾಗಿ ಬರುವುದುಂಟು. ಪಾಪೆಯ ಪ್ರದೇಶದಲ್ಲಿ ಬಿಳುಪು ಕಂಡಾಗ ಹುಟ್ಟು ಕಣ್ಪೊರೆ ಇಲ್ಲವೆ ದುರಂತ ಗತಿಯುಳ್ಳ ಪಾಪೆಯ ಪರೆಯೂತ ಇಲ್ಲವೆ ಕಣ್ಣೊಳಗೆ ಬೆಳೆಯುತ್ತಿರುವ ಗಂತಿ ಈ ಸ್ಥಿತಿಗಳನ್ನು ಯೋಚಿಸಬೇಕು. ಕಣ್ಣೊಳಗೆ ಗಂತಿಯು ಬೆಳೆಯುತ್ತಿದ್ದಲ್ಲಿ ಕಣ್ಣೊಳಗಿನ ಅಂತದ್ರ್ರವದ ಒತ್ತಡ ಹೆಚ್ಚಿ. ಕಣ್ಣುಗುಡ್ಡೆ ಹೊರಕ್ಕೆ ದೂಡಿದಂತಾಗುವುದು. ಕರಿಯ ಗುಡ್ಡೆಯು ಉಬ್ಬಿ ಪಾರದರ್ಶಕತೆಯನ್ನು ಕಳೆದುಕೊಂಡು ಬಿರಿದು ವ್ರಣವಾಗಿ ಕಣ್ಣು ನೋಡಲು ಭಯಂಕರವಾಗಿರುವುದು. ಹಾಗೆಯೇ ಬಿಟ್ಟಲ್ಲಿ ಕಣ್ಣು ಗಂತಿಯ ಕಣಗಳು ರಕ್ತನಾಳಗಳ ಮೂಲಕ ದೇಹದಾದ್ಯಂತ ಪ್ರಸರಿಸಿ ಮೆದುಳನ್ನು ಮುಟ್ಟಿ ಮಗುವಿಗೆ ಸಾವನ್ನು ತರಬಲ್ಲದು. ಆದರಿಂದ ಕಣ್ಣೊಳಗೆ ಬೆಳೆಯುತ್ತಿರುವುದು ಗಂತಿಯೆಂದು ನೇತ್ರ ಚಿಕಿತ್ಸಕರು ತಿಳಿಸಿದಾಗ ಮಗುವಿನ ಭವಿಷ್ಯದ ದೃಷ್ಟಿಯಿಂದ ಗಂತಿ ಬೆಳೆಯುತ್ತಿರುವ ಕಣ್ಣನ್ನು ಪೂರ್ಣವಾಗಿ ಹೊರತೆಗೆಯಬೇಕಾಗುವುದು. ಹುಟ್ಟು ಕಣ್ಪೊರೆಯ ಚಿಕಿತ್ಸೆಯನ್ನು ಹಿಂದೆಯೇ ತಿಳಿಸಿದೆ.

ಪಾಪೆಯ ಪರೆಯ ಊತವು ಸುಲಭವಾಗಿ ಚಿಕಿತ್ಸೆಗೆ ಬಗ್ಗುವಂತಹುದಲ್ಲ. ಈ ಸ್ಥಿತಿಗೆ ಕ್ಷಯದ ಹಿನ್ನೆಲೆ ಆರುವುದರಿಂದ ದೃಷ್ಟಿನಾಶ ಖಂಡಿತ. ಕುರುಡು ಮಗುವಿನ ಬಾಳಿಗೆ ಗಂಟುಬಿದ್ದಂತೆ ಎಂದು ತಿಳಿಯಬೇಕು, ಕೆಲಸಕ್ಕೆ ಸರಿಹೊಂದಿಸುವ ಶಾಲೆಯು ಮಗುವಿನ ಮುಂದಿನ ಬಾಳಿಗೆ ಸಹಾಯಮಾಡಬಲ್ಲದು.

# 4. ಮಕ್ಕಳಲ್ಲಿ ಕುರುಡನ್ನುಂಟು ಮಾಡುವ ವೈರಸ್ ರೋಗಗಳು

ವೈರಸ್ ರೋಗಾಣುಗಳು ಜೀವಕೋಟಿಯಲ್ಲಿರುವ, ಜೀವದ ಉದಯವೆನ್ನಬಹುದಾದ, ಸಂತಾನಶಕ್ತಿಯನ್ನು ಹೊಂದಿರುವ ಅತಿ ಸೂಕ್ಷ್ಮಾಣುಗಳು. ಇವುಗಳನ್ನು ಅತ್ಯಂತ ಸುಲಭ ಮತ್ತು ಸರಳ ಜೀವಿಗಳೆನ್ನಬಹುದು. ಸಾಧಾರಣ ಸೂಕ್ಷ್ಮದರ್ಶಿನಿಗೆ ಇವು ಗೋಚರವಾಗುವುದಿಲ್ಲ. ಇವುಗಳನ್ನು ನೋಡಲು ಎಲೆಕ್ಟ್ರಾನ್ ಸೂಕ್ಷ್ಮ ದರ್ಶಿನಿಯಿಂದ ಮಾತ್ರ ಸಾಧ್ಯ. ಇವುಗಳನ್ನು ಬ್ಯಾಕ್ಟೀರಿಯಾಗಳಂತೆ ಕೃತಕ ಮೀಡಿಯಂಗಳಲ್ಲಿ ಬೆಳೆಸಲಾಗುವುದಿಲ್ಲ, ಇವುಗಳ ಬೆಳವಣಿಗೆಗೆ ಜೀವಕಣಗಳು ಆವಶ್ಯಕ. ಅದರಿಂದ ಇವು ವೃದ್ಧಿಯಾಗಲು ಯೋಗ್ಯವಾದ ಜೀವಾಣುಗಳನ್ನು ಆರಿಸಿಕೊಳ್ಳುವುದರಲ್ಲಿ ಅತಿ ಸೂಕ್ಷ್ಮತೆಯನ್ನು ಪ್ರದರ್ಶಿಸುತ್ತವೆ. ವೈರಸ್‌ಗಳ ಇರುವಿಕೆಯನ್ನು ಇವುಗಳು ಉಂಟುಮಾಡುವ ರೋಗಗಳಿಂದಲೂ, ರೋಗದ ಲಕ್ಷಣಗಳಿಂದಲೂ, ದೇಹದಲ್ಲಿ ಉಂಟಾಗುವ ಬದಲಾವಣೆಗಳಿಂದಲೂ ತಿಳಿಯಬಹುದು. ಇವು ಪ್ರಾಣಿವರ್ಗವನ್ನೂ ಸಸ್ಯವರ್ಗವನ್ನೂ ಮುತ್ತಿ, ರೋಗವನ್ನುಂಟುಮಾಡಿ ಜೀವವರ್ಗವನ್ನೇ ನಿರ್ಮೂಲ ಮಾಡಬಲ್ಲವು. ಇವುಗಳಲ್ಲಿ ಮುಖ್ಯವಾದ ಸಿಡುಬು, ದಡಾರ, ಸೀತಾಳ ಸಿಡುಬು, ಹರಳುಗಣ್ಣು ಕುರುಡನ್ನುಂಟು ಮಾಡುವ ವೈರಸ್ಸುಗಳು.

## 1. ಸಿಡುಬು

ನಮ್ಮ ದೇಶದಲ್ಲಿ ಮಕ್ಕಳ ಕುರುಡಿಗೆ ಸಿಡುಬು ಬಹಳ ಮಟ್ಟಿಗೆ ಕಾರಣವಾಗಿರುತ್ತದೆ. ಸಿಡುಬಿನಿಂದಾಗುವ ಕುರುಡು ತಡೆಯಬಹುದಾದ ಕುರುಡು. ಹುಟ್ಟಿದ ಪ್ರತಿಯೊಂದು ಮಗು

ವಿಗೆ ಸಕಾಲದಲ್ಲಿ 'ದೇವಿ' ಹಾಕಿಸುವುದರಿಂದ ಸಿಡುಬಿನಿಂದಾಗುವ ಉಪದ್ರವವನ್ನು ತಡೆಯಬಹುದು. ಸಿಡುಬು ಹರಡುವ ಚಿನ್ಹೆ ಕಂಡ ಒಡನೆ 'ದೇವಿ' ಯನ್ನು ಕಡ್ಡಾಯವಾಗಿ ಮಕ್ಕಳಿಗೆ ಹಾಕಿಸುವುದರಿಂದ ಸಿಡುಬಿನಿಂದಾಗುವ ಕುರುಡನ್ನು ತಡೆಯಲು ಸಾಧ್ಯ. ಮಕ್ಕಳಿಗೆ 'ದೇವಿ' ಹಾಕಿಸುವ ವಿಚಾರದಲ್ಲಿ ಆಗಿಂದಾಗ್ಗೆ ವಿದ್ಯಾ ಪ್ರಚಾರ ಆಗತ್ಯ. 'ದೇವಿ' ಹಾಕಿಸುವ ವಿಷಯದಲ್ಲಿ ತಾಯಿ ತಂದೆಗಳ ಜವಾಬ್ದಾರಿಯೇ ಹಿರಿದು. ತಂದೆತಾಯಿಗಳ ಉದಾಸೀನತೆಯಿಂದ ಎಳೆಯ ಮಕ್ಕಳು ಸಿಡುಬಿಗೆ ತುತ್ತಾಗಿ ಮೃತ್ಯುವನ್ನು ಅಪ್ಪುವುವು. ಉಳಿದವು ಕುರೂಪಿಗಳಾಗಿ ಅಂಧ ಪ್ರಪಂಚವನ್ನು ಸೇರುವುವು. ಏಳನೆಯ ವರ್ಷದಲ್ಲಿ ಪ್ರತಿಯೊಬ್ಬ ಹುಡುಗನಿಗೂ ಮತ್ತೊಮ್ಮೆ 'ದೇವಿ' ಹಾಕಿಸುವುದು ಒಳ್ಳೆಯದು. ಸಿಡುಬಿನ ರೋಗ ತಲೆದೋರಿದಾಗ ಕೂಡಲೇ ವೈದ್ಯರ ಸಲಹೆ ಪಡೆಯಬೇಕು.

ಸಿಡುಬು ಕಣ್ಣಿನ ರೆಪ್ಪೆಯ ಮೇಲೂ, ಕರಿಯ ಗುಡ್ಡೆಯ ಮೇಲೂ ಕಾಣಿಸಿಕೊಳ್ಳುವುದು. ಕರಿಯ ಗುಡ್ಡೆಯ ಮೇಲೆ ಒಂದು ಗುಳ್ಳೆಯಂತೆ ಕಾಣಿಸಿಕೊಂಡು, ಅದು ನೀರುತುಂಬಿ, ದೊಡ್ಡದಾಗಿ ಬಿರಿದು ವ್ರಣವಾಗಿ, ಕರಿಯ ಗುಡ್ಡು ಬೆಳ್ಳಗಾಗುವುದು. ಇಲ್ಲವೇ ಬಿರಿದು ಕಣ್ಣು ಇಮಿರಿ ಗುಳಿಗಣ್ಣಾಗುವುದು. ಎಷ್ಟೋಬಾರಿ ಎರಡು ಕಣ್ಣುಗಳೂ ದೃಷ್ಟಿ ಕಳೆದುಕೊಂಡು ಹಾಳಾಗಿರುವುದುಂಟು. ವೈದ್ಯರ ಸಹಾಯವು ದೊರಕದಿದ್ದಲ್ಲಿ ಸಿಡುಬು ಕಾಣಿಸಿಕೊಂಡ ಕಣ್ಣುಗಳನ್ನು ಬೋರಿಕ್ ಲೋಷನ್ ನಿಂದ ಇಲ್ಲವೇ ಉಗುರುಬೆಚ್ಚನೆಯ ಉಪ್ಪುನೀರಿಂದ ತೊಳೆದು ಒಂದು ತೊಟ್ಟು ಮೀನಿನ ಎಣ್ಣೆಯನ್ನು ಹಾಕಿ ವ್ಯಾಸಲೈನನ್ನು ರೆಪ್ಪೆಗಳಿಗೆ ಲೇಪಿಸಬೇಕು. ಪ್ರತಿ ರಾತ್ರಿಯೂ ರೆಪ್ಪೆಗಳು ಅಂಟಿ

ಕೊಳ್ಳದಂತೆ ನೋಡಿಕೊಳ್ಳಲು ರೆಪ್ಪೆಗಳಿಗೆ ವ್ಯಾಸಲೈನನ್ನು ಹಚ್ಚ ಬೇಕು. ರೋಗದ ಉಲ್ಬಣ ಸ್ಥಿತಿಯಲ್ಲಿ ಕಣ್ಣುಗಳ ರೆಪ್ಪೆ ಮುಚ್ಚಿ ಕಣ್ಣಿಗೆ ಪಟ್ಟಿಯನ್ನು ಕಟ್ಟಬೇಕು. ಕಣ್ಣುಗಳಿಗೆ ಔಷಧಿಯನ್ನು ಹಾಕುವಾಗ ಮಾತ್ರ ಕಣ್ಣುಗಳನ್ನು ತೆರೆಯಬೇಕು. ಸಿಡುಬು ತಲೆದೋರಿದ ತತ್‌ಕ್ಷಣವೇ ವೈದ್ಯರ ನೆರವನ್ನು ಕೋರುವುದು ಒಳ್ಳಿತು. ಉಪಾಧ್ಯಾಯರು ಮಕ್ಕಳನ್ನು ಶಾಲೆಗೆ ಸೇರಿಸುವಾಗ 'ದೇವಿ' ಹಾಕಿಸಿದೆಯೋ ಇಲ್ಲವೇ ಎಂಬ ವಿಚಾರಕ್ಕೆ ಗಮನ ಕೊಡ ಬೇಕು. ಊರಿನಲ್ಲಿ ಸಿಡುಬಿನ ಸೋಂಕು ಇರುವಾಗ ಶಾಲೆಯ ಹುಡುಗರಿಗೆ ಕಡ್ಡಾಯವಾಗಿ 'ದೇವಿ' ಹಾಕಿಸಬೇಕು. ಶಾಲೆಯ ಹುಡುಗರಲ್ಲಿ ಸಿಡುಬು ತಲೆದೋರಿದಾಗ ಸಿಡುಬು ತಗುಲಿದ ಹುಡುಗರನ್ನು ಪ್ರತ್ಯೇಕಿಸಿ ವೈದ್ಯರಿಂದ ಚಿಕಿತ್ಸೆ ನಡೆಸಬೇಕು.

## 2. ಸೀತಾಳ ಸಿಡುಬು

ಇದೂ ಕೂಡ ಸಿಡುಬಿನಂತೆ ಸಾಂಕ್ರಾಮಿಕವಾಗಿ ಹರಡುವ ರೋಗ. ಇದು 2 ರಿಂದ 7ರ ವಯಸ್ಸಿನ ಮಕ್ಕಳಲ್ಲಿ ಕಾಣಿಸಿ ಕೊಳ್ಳುತ್ತದೆ. ಚರ್ಮದ ಮೇಲೆ ಗಾಜಿನ ಮಣಿಗಳಂತೆ ಗುಳ್ಳೆಗಳು ಕಾಣಿಸಿಕೊಳ್ಳುವುವು. ಜೊತೆಗೆ ಸ್ವಲ್ಪ ಜ್ವರವೂ ಇರುವುದು ; ಗುಳ್ಳೆಗಳು ಒಂದೇಸಾರಿ ಏಳದೆ, ಒಂದು ಗುಂಪು ಕಾಣಿಸಿಕೊಂಡ ಮೇಲೆ ಇನ್ನೊಂದು ಗುಂಪು ಸ್ವಲ್ಪ ಕಾಲಾನಂತರ ಬಿಟ್ಟು ಕಾಣಿಸಿ ಕೊಳ್ಳುವುವು. ಗುಳ್ಳೆಗಳಲ್ಲಿ ಕೆಲವು ಏಳುತ್ತಲೂ, ಕೆಲವು ಹಾಲು ತುಂಬಿಯೂ, ಕೆಲವು ಒಣಗುತ್ತಲೂ—ಎಲ್ಲಾ ಹಂತ ಗಳಲ್ಲೂ ಇರುವುವು. ಗುಳ್ಳೆಗಳು ಕಣ್ಣಿನ ಸಂಧಿ ಪರೆಯ ಮೇಲೂ ಏಳಬಹುದು. ಕಣ್ಣಲ್ಲಿ ನೀರು ಸುರಿಯುವುದುಂಟು. ಕಣ್ಣೆಂಪು ಕಾಣಿಸಿಕೊಳ್ಳುವುದು.

3. ದಡಾರ

ಇದೂ ಕೂಡ ವೈರಸ್ ಗುಂಪಿಗೆ ಸೇರಿದ ಮಕ್ಕಳಲ್ಲಿ ಕಾಣಿಸಿ ಕೊಳ್ಳುವ ಸಾಂಕ್ರಾಮಿಕ ರೋಗ. ಈ ರೋಗವು ಐದು ವರ್ಷ ದೊಳಗಿನ ಮಕ್ಕಳಲ್ಲಿ ಹೆಚ್ಚಾಗಿ ಕಾಣಿಸಿಕೊಳ್ಳುತ್ತದೆ. ರೋಗ ಬೆಳೆಯಲು ಹಿಡಿಸುವ ಕಾಲ 9 ರಿಂದ 11 ದಿನಗಳು. ರೋಗ ತಗುಲಿದ 10 ಅಥವಾ 11 ದಿನಗಳ ಮೇಲೆ ಸಾಧಾರಣ ನೆಗಡಿ ಯಿಂದ ಆರಂಭವಾಗಿ ಜ್ವರ, ಮೈಕೈನೋವು. ತಲೆನೋವು, ಮುಂಗೋಪ ಮತ್ತು ಸೋಲು ಕಾಣಿಸಿಕೊಳ್ಳುವುವು. ರೋಗ ಬೆಳೆದಂತೆ ಕಣ್ಣಲ್ಲಿ ನೀರು ಸುರಿಯುವುದು, ಕಣ್ಗೆಂಪು, ಬೆಳಕು ನೋಡಲು ಭಯ ಕಾಣಿಸಿಕೊಳ್ಳುವುದು, ಮೂಗಿನಲ್ಲಿ ನೀರು ಸುರಿಯುವುದು, ಸೀನುಗಳು ಮತ್ತು ಒಣಕೆಮ್ಮು—ಈ ರೋಗದ ಚಿಹ್ನೆಗಳು. ಮುಖವು ದದ್ದರಿಸಿಕೊಂಡು, ಕಣ್ಣುರೆಪ್ಪೆಗಳು ಊದಿ ಮುಖವು ದಪ್ಪವಾದಂತೆ ತೋರವುದು. ಜ್ವರವು ಇಳಿಯುವ ಹೊತ್ತಿಗೆ ಚರ್ಮದ ಮೇಲೆ ಗುಳ್ಳೆಗಳು ಉಕ್ಕುವುವು. ಕಣ್ಣುಗಳು ಕೆಂಪಾಗಿ ಪಿಸುರು ಕಟ್ಟುವುವು. ಗುಳ್ಳೆಗಳು ಮೊದಲು ಮುಖದ ಮೇಲೆ, ಅನಂತರ ಕಿವಿಯ ಹಿಂದೆ, ಕುತ್ತಿಗೆಯ ಪಕ್ಕದಲ್ಲಿ ಪ್ರಸರಿಸಿ, ಅನಂತರ ಎದೆ, ಹೊಟ್ಟೆ, ಭುಜ ಮತ್ತು ತೋಳಿನ ಮುಂಭಾಗ ವನ್ನು ಆಕ್ರಮಿಸುವುವು. ಮೂರನೆಯ ದಿನದ ಹೊತ್ತಿಗೆ ಗುಳ್ಳೆ ಗಳು ತಲೆ, ಮುಂಡ, ಭುಜ, ತೋಳುಗಳ ಮುಂಭಾಗ ಮತ್ತು ತೊಡೆಗಳ ಮುಂಭಾಗದ ಮೇಲೆ ಹರಡುವುವು. ಐದನೆಯ ದಿನದ ಹೊತ್ತಿಗೆ ಗುಳ್ಳೆಗಳು ಬೆಳವಣಿಗೆಯ ಶಿಖರವನ್ನು ಮುಟ್ಟುವುವು. ಎಂಟನೆಯ ದಿನದ ಹೊತ್ತಿಗೆ ಗುಳ್ಳೆಗಳು ಬಾಡಿ, ಗುಳ್ಳೆಗಳು ಕಂಡ ಕ್ರಮದಂತೆ ಒಣಗಲು ಆರಂಭಿಸುವುವು. ಗುಳ್ಳೆಗಳು ಬಾಡಲು ಉಪಕ್ರಮಿಸಿದಾಗ ರೋಗಿಯ ಸ್ಥಿತಿಯು ಸುಧಾರಿಸಿ,

ಜ್ವರವು ಇಳಿಮುಖವಾಗಿ, ಕಷ್ಟ ಸಡಲಿ ಹೊರಬೀಳುವುದು. ಬೆಳಕಿನ ಭಯ ತಪ್ಪಿದರೂ ಕಣ್ಣಲ್ಲಿ ಸೋಲು ಉಳಿದಿರುವುದು. ಕೆಲವು ಸಾರಿ ಕರಿಯ ಗುಡ್ಡೆಯ ಮೇಲೆ ಬಿಳಿಯ ಚುಕ್ಕಿಗಳು ಕಂಡು ಕಲೆಗಳಾಗಿ ದೃಷ್ಟಿ ನಾಶವಾಗಬಹುದು. ಕಣ್ಣಿನ ಸಂಧಿ ಪರೆಯ ಊತ ಬಹಳ ದಿನಗಳವರೆಗೆ ಇದ್ದುಕೊಂಡು ರೆಪ್ಪೆಗಳ ಅಂಚಿನ ಊತವನ್ನು ಉಂಟುಮಾಡಬಲ್ಲದು. ಪಾಪೆಯ ಪರೆಯ ಊತದಿಂದ ದೃಷ್ಟಿ ನಾಶವಾಗಬಹುದು.

4. ಹರಳುಗಣ್ಣು

ಇದು ವಿಶ್ವವ್ಯಾಪಿ. ಕುರುಡನ್ನುಂಟುಮಾಡುವ ರೋಗಗಳಲ್ಲಿ ಇದು ಅತಿ ಮುಖ್ಯವಾದುದು. ವಿಶ್ವದ ಜನಸಂಖ್ಯೆಯಲ್ಲಿ ನಾಲ್ಕ ನೆಯ ಒಂದು ಭಾಗ ಈ ರೋಗದಿಂದ ನರಳುತ್ತಿರುವರು. ಈ ರೋಗ ತಗುಲಿದ ಹದಿನೇಳು ಮಂದಿಯಲ್ಲಿ ಒಬ್ಬರು ಕುರು ಡಾಗುವುದು ಖಂಡಿತ. ಈ ರೋಗ ತಗುಲಿದವರಲ್ಲಿ ಶೇಕಡ 50ರಷ್ಟು ಅರೆ ಕುರುಡರಾಗುತ್ತಾರೆ. ನಮ್ಮ ದೇಶದ ಜನಸಂಖ್ಯೆ ಯಲ್ಲಿ ಶೇಕಡ 75 ರಷ್ಟು ಈ ರೋಗದಿಂದ ನರಳುತ್ತಿರುವರು. ಈ ರೋಗವು ರಾಜಸ್ತಾನ, ಪಂಜಾಬು, ದೆಹಲ್ಲಿ, ಉತ್ತರ ಪ್ರದೇಶ, ಬಿಹಾರ ಮತ್ತು ಮಧ್ಯ ಪ್ರದೇಶಗಳಲ್ಲಿ ಹೆಚ್ಚಿನ ಪ್ರಮಾಣದಲ್ಲಿ ಕಂಡಿರುತ್ತದೆ. ಪಂಜಾಬಿನಲ್ಲಿ ಕುರುಡಿಗೆ ಈ ರೋಗವು ಶೇಕಡ 60 ರಷ್ಟು ಕಾರಣವಾಗಿದೆ. ಉತ್ತರ ಭಾರತ ದಲ್ಲಿ ಈ ರೋಗವು ಬೃಹತ್ ಸಮಸ್ಯೆಯಾಗಿರುವುದರಿಂದ ಭಾರತ ಸರಕಾರವು 1956 ರಲ್ಲಿ ವಿಶ್ವ ಆರೋಗ್ಯ ಸಂಸ್ಥೆಯ ಆಶ್ರಯ ದಲ್ಲಿ, ಭಾರತ ವೈದ್ಯಕೀಯ ಸಂಶೋಧನಾ ಸಂಸ್ಥೆಯ ಹತೋಟಿ ಯಲ್ಲಿ ಹರಳುಗಣ್ಣು ಹತೋಟಿ ಯೋಜನಾ ಸಂಸ್ಥೆಯೊಂದನ್ನು ಸ್ಥಾಪಿಸಿತು. ಈ ಸಂಸ್ಥೆಯು ಈ ರೋಗದ ವಿವಿಧ ಮುಖ

ಗಳನ್ನು, ಸಾಂಕ್ರಾಮಿಕ ಸ್ವಭಾವವನ್ನು, ಸಮಸ್ಯೆಯ ಇತಿಮಿ
ಯನ್ನು ಅಭ್ಯಸಿಸಿ, ಜನಸಾಮಾನ್ಯರಲ್ಲಿ ಈ ರೋಗದ ಚಿಕಿತ್ಸೆ
ಮತ್ತು ಹತೋಟಿಯನ್ನು ರೂಪಿಸುವ ಹಾದಿಯಲ್ಲಿ ಸಂಶೋ
ಧನೆಗಳನ್ನು ನಡೆಸುತ್ತಿದೆ. ಈ ಸಂಸ್ಥೆಯು ದೇಶದಾದ್ಯಂತ
ಮಾದರಿ ಸರ್ವೆಗಳನ್ನು ನಡೆಸಿ, ಈ ರೋಗವು ಎಲ್ಲಾ ವಯಸ್ಸಿ
ನವರನ್ನೂ ಕಾಡಿಸುತ್ತಿದೆ ಎಂದು ತಿಳಿಸಿದೆ. ಎಳೆಯ ಮಕ್ಕಳಲ್ಲಿ
ಈ ರೋಗದ ತೀವ್ರತೆಯು ಹೆಚ್ಚು. ಈ ರೋಗವು ಸಾಧಾರಣ
ವಾಗಿ ಅನಾರೋಗ್ಯ ವಾತಾವರಣದಲ್ಲಿ ವಾಸಿಸುವ ಬಡವರಲ್ಲಿಯೇ
ಹೆಚ್ಚು ಸಂಖ್ಯೆಯಲ್ಲಿ ಕಾಣಿಸಿಕೊಳ್ಳುತ್ತದೆ.

ಈ ರೋಗದ ಹತೋಟಿ ಮತ್ತು ನಿವಾರಣೆ ಅಷ್ಟು ಸುಲಭ
ವಲ್ಲ. ಇದರ ನಿರ್ಮೂಲನದಲ್ಲಿ ನೇತ್ರ ವೈದ್ಯರೂ, ಸಾರ್ವಜನಿಕ
ಆರೋಗ್ಯಶಾಖೆಯೂ ನಿರಂತರ ಶ್ರಮಿಸಬೇಕಲ್ಲದೆ, ಜನರ ಸಹ
ಕಾರವು ಅತ್ಯಗತ್ಯ. ವಿದ್ಯಾಪ್ರಚಾರ ಅತಿ ಮುಖ್ಯ. ಆರೋಗ್ಯ
ನಿಯಮಗಳನ್ನು ತಪ್ಪದೆ ಪಾಲಿಸಬೇಕಾದುದು ಆವಶ್ಯಕ. ಜನರ
ಜೀವನದ ಮಟ್ಟ, ವಾಸಿಸುವ ರೀತಿ, ವಸತಿಗಳು—ಇವುಗಳ
ಕಡೆಗೆ ಗಮನ ಹರಿಸುವುದು ಅಗತ್ಯ. ಆರೋಗ್ಯ ನಿಯಮಗಳನ್ನು
ಅನುಸರಿಸದಿದ್ದಲ್ಲಿ ಮನೆಯಲ್ಲಿರುವರೆಲ್ಲರಿಗೂ ರೋಗ ಹರಡುವ
ಸಂಭವವೇ ಹೆಚ್ಚು. ಮನೆಮಂದಿಯೆಲ್ಲರೂ ಒಂದೇ ಬಟ್ಟೆಯಿಂದ
ಮುಖ ಒರೆಸಿಕೊಳ್ಳುವುದರಿಂದಲೂ, ಇಲ್ಲವೇ ತಾಯಿಯು ತನ್ನ
ಸೆರಗಿಂದ ಮನೆ ಮಕ್ಕಳ ಮುಖ ಕಣ್ಣುಗಳನ್ನು ಒರೆಸುವುದ
ರಿಂದಲೂ, ಒಂದೇ ಕಡ್ಡಿಯಿಂದ ಮನೆ ಮಕ್ಕಳೆಲ್ಲರೂ ಕಣ್ಣ ಪ್ಪು,
ಸುರ್ಮಾ, ಕಾಜಲ್‌ಗಳನ್ನು ಲೇಪಿಸಿಕೊಳ್ಳುವುದರಿಂದಲೂ ಈ
ರೋಗವು ಸುಲಭವಾಗಿ ಒಬ್ಬರಿಂದೊಬ್ಬರಿಗೆ ಹರಡುವುದು.
ಜೊತೆಗೆ ಜನಸಂದಣಿಯ ಒತ್ತಡದ ಜೀವನ, ಅನಾರೋಗ್ಯ
ಕರವಾದ ವಸತಿ ಗೃಹಗಳು, ಸುತ್ತಮುತ್ತಲಿರುವ ನೊಣಗಳ

ಹಾವಳಿ, ಧೂಳು, ಗಾಳಿ ಇವು ಕೂಡ ರೋಗದ ಹರಡುವಿಕೆಗೆ ಸಹಕಾರಿಗಳು. ನೊಣಗಳು ಈ ರೋಗದ ಹರಡುವಿಕೆಯಲ್ಲಿ ಪ್ರಮುಖ ಪಾತ್ರವನ್ನು ವಹಿಸುತ್ತವೆ. ಇವು ಕಣ್ಣಿಂದ ಕಣ್ಣಿಗೆ ಹಾರುತ್ತ ರೋಗದ ಸೋಂಕನ್ನು ಹರಡುವುವು. ಮುಸ್ಲಿಂ ಜನಾಂಗ ದಲ್ಲಿ ಈ ರೋಗವು ಹೆಚ್ಚು ಸಂಖ್ಯೆಯಲ್ಲಿ ಕಂಡುಬಂದಿರುತ್ತದೆ. ಅವರಲ್ಲಿರುವ ಘೋಷಾಪದ್ಧತಿಯು ರೋಗದ ಹರಡುವಿಕೆಗೆ ಕಾರಣವಾಗಿರಬಹುದು. ಶಾಲೆಗಳಲ್ಲೂ. ವಿದ್ಯಾರ್ಥಿನಿಲಯಗಳ ಗಳಲ್ಲೂ, ಜೈಲುಗಳಲ್ಲೂ, ಕಾರ್ಖಾನೆಗಳಲ್ಲೂ, ಮಿಲಿಟರಿ ಬ್ಯಾರಕ್ ಗಳಲ್ಲೂ ರೋಗ ಹರಡುವ ಪ್ರಮೇಯ ಹೆಚ್ಚು. ಅದರಿಂದ ಶಾಲಾಬಾಲಕರು ಕಣ್ಣುಗಳನ್ನು ನೇತ್ರ ವೈದ್ಯರಿಂದ ಆಗಿಂದಾಗ್ಗೆ ಪರೀಕ್ಷಿಸಿಕೊಳ್ಳುತ್ತಿರಬೇಕು.

ರೋಗದ ಲಕ್ಷಣಗಳು: ರೋಗ ಬೆಳೆಯಲು ಹಿಡಿಸುವ ಕಾಲ ಸುಮಾರು ಒಂದು ವಾರ. ಈ ರೋಗದ ಗತಿಯು ಬ್ಯಾಕ್ಟೀರಿಯಾಣುಗಳ ಸಂಪರ್ಕವನ್ನು ಅವಲಂಬಿಸಿದೆ. ಬ್ಯಾಕ್ಟೀರಿಯಾಣುಗಳ ಸಂಪರ್ಕವಿಲ್ಲದಿದ್ದಲ್ಲಿ, ರೋಗವು ತಾನಾಗಿಯೇ, ರೋಗಿಗೆ ಅರಿವಿಲ್ಲ ದಂತೆ ಕಣ್ಣುಗಳಿಗೆ ತ್ರಾಸವಿಲ್ಲದಂತೆ ಕಲೆಯ ಹಂತ (state of scarring)ವನ್ನು ಮುಟ್ಟಿ ವಾಸಿಯಾಗುವುದು. ಈ ರೀತಿಯ ರೋಗದ ಗತಿಯು ಹೆಚ್ಚಾಗಿ ಶ್ರೀಮಂತ ಸಮಾಜದವರಲ್ಲೂ. ಆರೋಗ್ಯಕರ ಸನ್ನಿವೇಶದಲ್ಲಿ ವಾಸಿಸುವವರಲ್ಲೂ ಕಾಣುವುದು. ಈ ರೋಗವು ಬಡವರಿಗೇ ಸೀಮಿತವಾಗಿರುವುದರಿಂದಲೂ, ಬಡವರ ವಸತಿಗಳು ರೋಗದ ಬೆಳವಣಿಗೆಗೆ ಉತ್ತೇಜನಕಾರಿಯಾಗಿರುವು ದರಿಂದಲೂ, ಬ್ಯಾಕ್ಟೀರಿಯಾಣುಗಳ ಸಂಪರ್ಕಕ್ಕೆ ಹೆಚ್ಚು ಅವಕಾಶ ವಿರುವುದರಿಂದಲೂ, ಆರೋಗ್ಯ ನಿಯಮಗಳ ಪಾಲನೆಯ ಅರಿವಿಲ್ಲ ದುದರಿಂದಲೂ ಈ ರೋಗವು ಸಾದಾರಣವಾಗಿ ದುರಂತಗತಿಯ

ಹಾದಿಯನ್ನೇ ಹಿಡಿಯುವುದು. ಬ್ಯಾಕ್ಟೀರಿಯಾಣುಗಳ ಸಂಪರ್ಕ
ಹೊಂದಿ ಈ ರೋಗವು ಬಡವರಲ್ಲಿ ಹಠಾತ್ತಾಗಿ ಕಾಣಿಸಿಕೊಳ್ಳು
ವುದು. ರೋಗದ ಲಕ್ಷಣಗಳು ಸಾಮಾನ್ಯವಾಗಿ ಪಿಸುರುಗಣ್ಣಿ
ಲಕ್ಷಣಗಳನ್ನೇ ಹೋಲಿದ್ದು, ಕಣ್ಬೇಂಪು ವಾಸಿಯಾಗುವ ಹೊತ್ತಿ
ರೋಗದ ನೈಜ ಸ್ವರೂಪವು ಹೊರಬೀಳುವುದು. ಸಕಾಲದ
ಸರಿಯಾದ ಚಿಕಿತ್ಸೆ ದೊರೆಯದಿದ್ದಲ್ಲಿ, ಈ ರೋಗವು ಉಳಿದಿರು
ಬ್ಯಾಕ್ಟೀರಿಯಾಣುಗಳ ಸಂಪರ್ಕ ಪಡೆದು ಹಾಗೆಯೇ ಕಾಡುತ್ತಾ
ದುರಂತ ಗತಿಯನ್ನು ಉಂಟುಮಾಡುವುದು.

ಈ ರೋಗದಲ್ಲಿ ಕಣ್ಣುರೆಪ್ಪೆಯೊಳಗೆ ಹರಳು ಕಾಣಿ
ಕೊಳ್ಳುವುವು. ಅದರಿಂದ ಈ ರೋಗಕ್ಕೆ ಹರಳುಗಣ್ಣು ಎಂದು
ಹೆಸರುಬಂದಿದೆ. ಈ ಹರಳು ಕಣ್ಣಲ್ಲಿ ಮರಳು ತೂರಿದಂತೆ
ಹೊರಪದಾರ್ಥಗಳು ಬಿದ್ದಂತೆ ಭಾಸವಾಗುವುದರಿಂದ ರೋಗಿಗ
ಪದೇಪದೇ ಕಣ್ಣನ್ನು ಉಜ್ಜಬೇಕೆನಿಸುವುದು, ಉಜ್ಜುವುದರಿಂದ
ಕಣ್ಬೇಂಪುಬಂದು ಪಿಸುರುಗಟ್ಟುವುದು, ಕಣ್ಣುರಿ. ಕಣ್ಣಲ್ಲಿ ನೀರು
ಸುರಿಯುವುದು, ಬೆಳಕಿನ ಭೀತಿ ಕಾಣಿಸಿಕೊಳ್ಳುವುದು. ರೆಪ್ಪೆಗಳು
ಭಾರವಾಗಿ ಕಣ್ಣುಗಳಲ್ಲಿ ಒಂದು ಬಗೆಯ ಅಶಾಂತಿ ಮೂಡುವುದು.
ರೋಗ ಬೆಳೆದಂತೆ ಕ್ರಮೇಣ ಕರಿಯ ಗುಡ್ಡೆಯ ಅಂಚಿನಲ್ಲಿ
ರಕ್ತನಾಳಗಳಿಂದ ಕೂಡಿದ ತೆಳುವಾದ ಬೆಳ್ಪರೆಯು ಮುಚ್ಚಿಕೊಂಡು
ದೃಷ್ಟಿಮಂದವನ್ನುಂಟು ಮಾಡುವುದು. ರೋಗ ವೃದ್ಧಿ
ಯಾದಂತೆ ರೆಪ್ಪೆಗಳು ದಪ್ಪನಾಗಿ ವಕ್ರ ವಕ್ರವಾಗಿ ಕಾಣುವುದಲ್ಲದೆ
ವಕ್ರವಾಗಿ ತಿರುಗಿರುವ ರೆಪ್ಪೆಯ ಕೂದಲು ಕರಿಯ ಗುಡ್ಡೆಯ
ಮೇಲೆರಾಚಿ ವರ್ಣವನ್ನುಂಟುಮಾಡುವುದು. ಈ ವರ್ಣಗಳು
ವಾಸಿಯಾದ ಮೇಲೆ ಕರಿಯ ಗುಡ್ಡೆಯ ಹೊಳಪನ್ನು ನಾಶಮಾಡಿ
ದೃಷ್ಟಿ ನಾಶವನ್ನುಂಟುಮಾಡುವುದು. ಇಲ್ಲವೇ ವ್ರಣಗಳು
ಕಣ್ಣಲ್ಲಿರುವ ಬ್ಯಾಕ್ಟೀರಿಯಾಣುಗಳ ಸಂಪರ್ಕಹೊಂದಿ ಉಲ್ಬ

ಸಿ ಕೀತುಃ ತೂತಾಗಿ ಗುಳಿಗಣ್ಣು ಇಲ್ಲವೇ ದ್ರಾಕ್ಷಿಗಣ್ಣಿನಲ್ಲಿ ಕೊನೆಯಾಗಬಹುದು. ಈ ರೋಗಕ್ಕೆ ಸಕಾಲದಲ್ಲಿ ಚಿಕಿತ್ಸೆ ಮಾಡಿಸದಿದ್ದಲ್ಲಿ ಪೂರ್ಣ ಅಂಧತ್ವವೇ ಗತಿ.

ನಿವಾರಣೆ : ಈ ರೋಗವು ಸುಲಭವಾಗಿ ಒಬ್ಬರಿಂದೊಬ್ಬರಿಗೆ ಅಂಟುವ ಸ್ವಭಾವವಿರುವುದರಿಂದ ಆರೋಗ್ಯ ನಿಯಮಗಳ ಪಾಲನೆಗೆ ಮತ್ತು ಶುಚಿತ್ವಕ್ಕೆ ಮೊದಲು ಗಮನ ಕೊಡಬೇಕು. ನೊಣಗಳ ನಿರ್ಮೂಲನಕ್ಕೆ ಯತ್ನಿಸಬೇಕು. ಮಗುವನ್ನು ನೊಣಗಳು ಮುತ್ತದಂತೆ ಸುತ್ತ ಸೊಳ್ಳೆಪರದೆಯ ಕವಚದಲ್ಲಿರಿಸಬೇಕು. ಕೊಳೆ ಕೈಬೆರಳುಗಳಿಂದ ಕಣ್ಣುಗಳನ್ನು ಒರೆಸಿಕೊಳ್ಳಬಾರದು. ಕಣ್ಣುಗಳನ್ನು ಒರೆಸಿಕೊಳ್ಳುವ ಕರವಸ್ತ್ರಗಳು ಶುಚಿಯಾಗಿರಬೇಕು. ಅಲ್ಲದೆ ಪ್ರತ್ಯೇಕವಾಗಿರಬೇಕು. ಒಬ್ಬರ ಕಣ್ಣಿಗೆ ಉಪಯೋಗಿಸಿದ ಔಷಧಿಯ ಕಡ್ಡಿಗಳನ್ನು ಇನ್ನೊಬ್ಬರ ಕಣ್ಣಿಗೆ ಉಪಯೋಗಿಸಬಾರದು. ಸುರ್ಮ, ಕಾಜಲ್, ಕಣ್ಕಪ್ಪು ಮೊದಲಾದ ಸೌಂದರ್ಯವರ್ಧಕ ಸಾಧನಗಳನ್ನು ಒಂದೇ ಕಡ್ಡಿಯಿಂದ ಮನೆ ಮಕ್ಕಳೆಲ್ಲರೂ ಬಳಸುವುದು ತಪ್ಪು.

ಈ ರೋಗದ ಸೋಂಕು ತಗುಲಿದ ಹುಡುಗರು ಇತರರೊಂದಿಗೆ ಸೇರದಂತೆ ನೋಡಿಕೊಳ್ಳಬೇಕು. ಈ ರೋಗವು ಅಶ್ರದ್ಧೆಯಿಂದ ನರ್ಸ್‌ಗಳಿಗೂ, ಡಾಕ್ಟರ್‌ಗಳಿಗೂ ತಗಲುವುದುಂಟು. ಈ ರೋಗಿಗಳನ್ನು ಮುಟ್ಟಿದ ಮೇಲೆ ಕೈಗಳನ್ನು ಸೋಪಿನಿಂದ ತೊಳೆದುಕೊಳ್ಳುವುದು ಒಳಿತು. ಹುಡುಗರನ್ನು ಮೊದಲಿನಿಂದಲೂ ಆರೋಗ್ಯ ನಿಯಮಗಳ ವಾತಾವರಣದಲ್ಲಿ ಬೆಳೆಯುವಂತೆ ಮಾಡುವುದು ಅತ್ಯಾವಶ್ಯಕ. ಶಾಲೆಗಳಲ್ಲಿ ಮತ್ತು ವಿದ್ಯಾರ್ಥಿ ನಿಲಯಗಳಲ್ಲಿ ರೋಗ ತಗಲಿದ ಮಕ್ಕಳನ್ನು ನೇತ್ರ ಚಿಕಿತ್ಸಕರಲ್ಲಿ ತೋರಿಸಿ ಪೂರ್ಣ ವಾಸಿಮಾಡಲು ಯತ್ನಿಸಬೇಕು. ಅಲ್ಲದೆ ಶಾಲಾ ಹುಡು

ಗರ ಆರೋಗ್ಯವನ್ನು ಆಗಿಂದಾಗ್ಗೆ ಪರೀಕ್ಷಿಸಿ ಹೆರಳುಗಣ್ಣುಳ್ಳವ
ರನ್ನು ಪತ್ತೆಹಚ್ಚಿ ಚಿಕಿತ್ಸೆಗೆ ಗುರಿಪಡಿಸಬೇಕು. ಈ ರೋಗದ
ಹತೋಟಿಯ ಬಗ್ಗೆ ಸಾರ್ವಜನಿಕ ಆರೋಗ್ಯಶಾಖೆಯು ಸೂಕ್ತ
ಕ್ರಮಗಳನ್ನು ತೆಗೆದುಕೊಳ್ಳುವಂತೆ ಒತ್ತಾಯಪಡಿಸಬೇಕು.

ಚಿಕಿತ್ಸೆ : ರೋಗದ ಶೈಶವಾವಸ್ಥೆಯಲ್ಲಿ ಆಂಟಿಬಯೋಟಿಕ
ಗುಂಪಿಗೆ ಸೇರಿದ ಟೆರಮೈಸಿನ್, ಆರಿಯೋಮೈಸಿನ್, ಕ್ಲೋರೊ
ಮೈಸಿಟಿನ್ ಮತ್ತು ಸಲ್ಫ ಔಷಧಿಗಳು ತೊಟ್ಟುಗಳ ರೂಪ
ದಲ್ಲೂ ಮತ್ತು ಲೇಪನಗಳ ಮೂಲಕವೂ ಫಲಕಾರಿಯೆಂದು
ಕಂಡುಬಂದಿರುತ್ತದೆ. ಸಲ್ಫಸಿಟಮೈಡ್ 20% ತೊಟ್ಟುಗಳನ್ನು
ದಿನಕ್ಕೆ ನಾಲ್ಕುಬಾರಿ ಹಾಕಬೇಕು. ರಾತ್ರಿ ಮಲಗುವ ವೇಳೆ
10% ಸಲ್ಫಸಿಟಮೈಡ್ ಲೇಪನವನ್ನು ರೆಪ್ಪೆಗಳಿಗೆ ಲೇಪಿಸ
ಬೇಕು. ಜೊತೆಗೆ ಸಲ್ಫ ಔಷಧಿ ಮಾತ್ರೆಗಳನ್ನು ಪೂರ್ಣ ಪ್ರಮಾಣ
ದಲ್ಲಿ ವೈದ್ಯರ ನೇತೃತ್ವದಲ್ಲಿ ತೆಗೆದುಕೊಳ್ಳಬೇಕು. ವೈದ್ಯರ ಸಲಹೆ
ಇಲ್ಲದೆ ಈ ಔಷಧಿಗಳಾವುವನ್ನೂ ಹೆಚ್ಚು ಕಾಲ ಉಪಯೋಗಿಸ
ಬಾರದು. ರೆಪ್ಪೆಗಳ ವಿಕಾರಕ್ಕೂ, ರೆಪ್ಪೆಕೂದಲಿನ ವಕ್ರತೆಗೂ
ಶಸ್ತ್ರಚಿಕಿತ್ಸೆ ಅಗತ್ಯ.

# 5. ಮಕ್ಕಳಲ್ಲಿ ಕುರುಡುಂಟುಮಾಡುವ ಬ್ಯಾಕ್ಟೀರಿಯಾಣುಗಳ ಕಣ್ಣು ರೋಗಗಳು

## 1. ಸೋರುಗಣ್ಣು (ಪಿಸುರುಗಣ್ಣು, ಕೆಂಗಣ್ಣು, ಕಣ್ಣುನೋವು)

ಇದು ಸಾಮಾನ್ಯವಾಗಿ ಮಕ್ಕಳಲ್ಲೂ ದೊಡ್ಡವರಲ್ಲೂ ಕಾಣಿಸಿಕೊಳ್ಳುವ ಕಣ್ಣಿನ ರೋಗ. ಸಾಧಾರಣವಾಗಿ ಬೇಸಿಗೆಯಲ್ಲಿ, ಮಾವಿನಹಣ್ಣಿನ ಕಾಲದಲ್ಲಿ ಈ ರೋಗವು ಹೆಚ್ಚಿನ ಪ್ರಮಾಣದಲ್ಲಿ ಕಂಡು ಬರುತ್ತದೆ. ಮನೆಯಲ್ಲಿ ಒಂದು ಮಗುವಿಗೆ ಈ ರೋಗ ತಗುಲಿದಲ್ಲಿ ಮನೆಯಲ್ಲಿರುವವರೆಲ್ಲರಿಗೂ ಸಾಂಕ್ರಾಮಿಕವಾಗಿ ಹರಡುವುದುಂಟು. ಬೇಸಿಗೆಯ ಕಾಲದ ಉಷ್ಣ ವಾತಾವರಣವು ಬ್ಯಾಕ್ಟೀರಿಯಾಣುಗಳ ವೃದ್ಧಿಗೆ ಉತ್ತೇಜನಕಾರಿ. ಜೊತೆಗೆ ಬೀಸುವ ಬೆಚ್ಚನೆಯ ಗಾಳಿ ಮತ್ತು ಧೂಳು ಕಣ್ಣೊಳಕ್ಕೆ ಹೊರ ಪದಾರ್ಥಗಳ ಪ್ರವೇಶಕ್ಕೆ ಅನುಕೂಲ ಮಾಡಿಕೊಡುವುವು. ಕಣ್ಣು ಉಜ್ಜುವುದರಿಂದ ಕಣ್ಣಲ್ಲಿ ಸಣ್ಣಪುಟ್ಟ ಗಾಯಗಳಾಗಿ, ಇವುಗಳನ್ನು ಹೊಂಚುಕಾಯುತ್ತಿರುವ ಬ್ಯಾಕ್ಟೀರಿಯಾಣುಗಳು ಮುತ್ತಿ ರೋಗವನ್ನುಂಟುಮಾಡುವುವು. ಕಣ್ಣಿನ ಸುತ್ತ ಸುತ್ತುತ್ತಿರುವ ಕಣ್ಣಿನ ಗುಂಗುರುಗಳು ಈ ರೋಗವನ್ನು ಕಣ್ಣಿಂದ ಕಣ್ಣಿಗೆ ಸುಲಭವಾಗಿ ಹರಡುವುವು. ಕಾಕ್‌ವೀಕ್ಸ್ ಬೆಸಲಿ, ನ್ಯೂಮೋಕೋಕಸ್, ಸ್ಟೆಪಲೋಕೋಕಸ್, ಇನ್‌ಫ್ಲೂಯೆನ್‌ಜಾ ಬೆಸಿಲಸ್ ಮತ್ತು ಕೆಲವು ವೈರಸ್ ಗುಂಪಿಗೆ ಸೇರಿದ ರೋಗಾಣುಗಳು ಈ ರೋಗ ವಾಹಕಗಳು.

ರೋಗದ ಲಕ್ಷಣಗಳು : ರೋಗ ಬೆಳೆಯಲು ಹಿಡಿಸುವ ಕಾಲ 48 ಗಂಟೆಗಳು. ಕಣ್ಣನ್ನು ಮುಚ್ಚಿರುವ ಸಂಧಿಪರೆಯು ಕೆಂಪಗೆ

ಊದಿಕೊಂಡು ಪಿಸುರುಗಟ್ಟುವುದು. ಕಣ್ಣು ಕೆಂಪಿರುವುದರಿಂದ
ಇದನ್ನು 'ಕೆಂಗಣ್ಣು' ಎಂದು ಕರೆಯುವುದುಂಟು. ಕಣ್ಣಿನ ಕೆಂಪು
ಕರಿಯ ಗುಡ್ಡೆಯಿಂದ ದೂರಸರಿದಂತೆ ಹೆಚ್ಚಾಗುತ್ತಾ ಹೋಗು-
ವುದು. ರೆಪ್ಪೆಗಳು ಕೆಂಪಗೆ ಊದಿಕೊಂಡು ಕಣ್ಣು ತೆರೆಯಲು
ಕಷ್ಟವಾಗುವುದು. ರೆಪ್ಪೆಯ ಅಂಚಿನಲ್ಲಿ ಪಿಸುರು ಕಟ್ಟಿರುವುದು
ಕಣ್ಣಲ್ಲಿ ಉರಿ, ಬೆಳಕಿನ ಭಯ, ಒಂದು ಬಗೆಯ ಅಶಾಂತಿ
ಮರಳು ತೂರಿದಂತಿರುವುದು—ಇವು ರೋಗದ ಲಕ್ಷಣಗಳು
ಬೆಳಗಿನ ಹೊತ್ತು ನಿದ್ದೆಯಿಂದ ಏಳುವಾಗ ರೆಪ್ಪೆಗಳು ಪಿಸುರಿ-
ನಿಂದ ಅಂಟಿಕೊಂಡಿರುವುದರಿಂದ ಕಣ್ಣನ್ನು ಬಿಡಲಾಗುವುದಿಲ್ಲ
ಒಮ್ಮೊಮ್ಮೆ ಕರಿಯ ಗುಡ್ಡೆಯ ಅಂಚಿನಲ್ಲಿ ಬಿಳಿಯ ಚುಕ್ಕೆ-
ಯಂತಹ ವ್ರಣಗಳು ಕಾಣಿಸಿಕೊಳ್ಳಬಹುದು. ನ್ಯೂಮೋಕೋ-
ಕಸ್ ಕಾರಣವಾಗಿರುವ ಸಂಧಿ ಪರೆಯೂತದಲ್ಲಿ ಕೆಂಪುಚುಕ್ಕಿಗಳಂತಹ
ರಕ್ತಸ್ರಾವದ ಚುಕ್ಕಿಗಳು ಕಾಣಿಸಿಕೊಳ್ಳುವುವು. ಸ್ಟೆಪಲೋ-
ಕೋಕಸ್ ಕಾರಣವಾಗಿರುವ ಸಂಧಿ ಪರೆಯೂತವು ಕೊಳೆ ಬೆರಳು-
ಗಳಿಂದ ಕಣ್ಣನ್ನು ಉಜ್ಜುವುದರಿಂದ ಬರುವುದು. ಇದು ಯಾವಾಗ-
ಲಾದರೂ ಯಾವ ಕಾಲದಲ್ಲಾದರೂ ಕಾಣಿಸಿಕೊಳ್ಳಬಹುದು.

ಈ ರೋಗವು ಸುಲಭವಾಗಿ ಒಬ್ಬರಿದೊಬ್ಬರಿಗೆ ಹರಡು-
ವುದರಿಂದ ರೋಗ ತಗುಲಿದ ಮಕ್ಕಳನ್ನು ಪೂರ್ಣ ವಾಸಿಯಾಗುವ
ವರೆಗೂ ಶಾಲೆಗೆ ಕಳುಹಿಸಬಾರದು. ಈ ರೋಗವು ಕರವಸ್ತ್ರ-
ಗಳಿಂದಲೂ, ಟವಲುಗಳಿಂದಲೂ, ಕೊಳೆ ಕೈಬೆರಳುಗಳಿಂದಲೂ
ಒಬ್ಬರಿಂದೊಬ್ಬರಿಗೆ ಹರಡುವುದುಂಟು.

ಚಿಕಿತ್ಸೆ : ಶುಚಿತ್ವಕ್ಕೆ ಮೊದಲು ಗಮನ ಕೊಡಬೇಕು. ರೋಗಿ-
ಗಳನ್ನು ಶುಶ್ರೂಷೆ ಮಾಡುವಾಗ ಎಚ್ಚರ ವಹಿಸಬೇಕು. ನೊಣ-
ಗಳ ಮತ್ತು ಗುಂಗುರುಗಳ ಮರ್ದನಕ್ಕೆ ಗಮನಕೊಡಬೇಕು

ಬಳಸುವ ಬಟ್ಟಲುಗಳು, ಬಟ್ಟೆಬರೆಗಳು ಕೊಳೆಯಾಗದಂತೆ ನೋಡಿ ಕೊಳ್ಳಬೇಕು. ರೋಗಿಗಳು ರೋಗ ವಾಸಿಯಾಗುವವರೆಗೂ ಕೆಲಸಕ್ಕಾಗಲೀ, ಮನರಂಜನೆಯ ಸ್ಥಳಗಳಿಗಾಗಲೀ ಹೋಗಬಾರದು.

ರೆಪ್ಪೆಗಳ ಅಂಚಿನಲ್ಲಿರುವ ಅಕ್ಕುಗಳನ್ನು ಶುಭ್ರನೀರಿನಲ್ಲಿ ಅದ್ದಿದ ಹತ್ತಿಯಿಂದ ಒರೆಸಬೇಕು. ಸಲ್ಪ ಮತ್ತು ಇತ್ತೀಚಿನ ಆಂಟಿ ಬಯೋಟಿಕ್ ಔಷಧಿ ತೊಟ್ಟುಗಳು ಫಲಕಾರಿ ಎಂದು ಕಂಡಿವೆ. ಕಣ್ಣನ್ನು ಬೆಚ್ಚನೆಯ ಉಪ್ಪುನೀರಿಂದ ಇಲ್ಲವೆ ಬೋರಿಕ್‌ಲೋಷನ್ ನಿಂದ ಪಿಸುರು ಹೋಗುವವರೆಗೂ ತೊಳೆದು, ಸ್ಟ್ರೆಪ್ಟೊಪೆನಿಸಿಲಿನ್ ತೊಟ್ಟುಗಳನ್ನು ಹಾಕಬೇಕು. ಮಲಗುವ ಹೊತ್ತಿಗೆ ಸ್ಟೆರೈಲ್ ವ್ಯಾಸಲೀನ್ ಇಲ್ಲವೆ ಆಂಟಿಬಯೋಟಿಕ್ ಮುಲಾಮನ್ನು ರೆಪ್ಪೆಗಳಿಗೆ ಹಚ್ಚಬೇಕು. ರೋಗವು ಸಾಧಾರಣವಾಗಿ 4-5ದಿನಗಳಲ್ಲಿ ಹಿಮ್ಮುಖ ವಾಗುವುದು. ಕ್ಲೋರೋ ಆರ್ಮಪಿನಿಕಾಲ್ 1% ಮುಲಾಮನ್ನು ಉಪಯೋಗಿಸಬಹುದು. ನೇತ್ರ ವೈದ್ಯರ ಸಲಹೆ ಇಲ್ಲದೆ ಈ ಔಷಧಿಗಳನ್ನು ಬಳಸಬಾರದು.

ಕಣ್ಣೆಂಪಿಗೆ ಇತರ ಕಾರಣಗಳು : ಮಕ್ಕಳಲ್ಲಿ 'ದಡಾರ' ಕಾಣಿಸಿ ಕೊಳ್ಳುವುದಕ್ಕೆ ಮುಂಚೆ ಕಣ್ಣು ಕೆಂಪಾಗಿ ನೀರು ಸುರಿಯುವು ದುಂಟು. ಕರಿಯ ಗುಡ್ಡೆಯ ಮೇಲೆ ಬಿಳಿಯ ಚುಕ್ಕಿಗಳು ಕಂಡು ವ್ರಣವಾಗಿ ದೃಷ್ಟಿ ನಾಶವಾಗುವುದುಂಟು. ಅದರಿಂದ ಕರಿಯ ಗುಡ್ಡೆಯ ಮೇಲೆ ವ್ರಣಗಳು ಕಂಡಲ್ಲಿ ಕೂಡಲೇ ನೇತ್ರ ವೈದ್ಯರ ಸಲಹೆ ಪಡೆಯಬೇಕು. ಸಾಧಾರಣ ಕಣ್ಣು ನೋವೆಂದು ಉದಾಸೀನ ಮಾಡಬಾರದು.

ವೈರಸ್‌ಕಾರಕವುಳ್ಳ ಸಾಂಕ್ರಾಮಿಕ ಕರಿಯ ಗುಡ್ಡೆ ಸಂಧಿ ಪರೆ ಯಊತ ಬಿದ್ದಂತೆ ಆರಂಭವಾಗುವುದು. ಅನಂತರ ಕಣ್ಣೀರಿ ಮತ್ತು

ಕಣ್ಣುಊತ ಕಾಣಿಸಿಕೊಳ್ಳುವುದು. ಜೊತೆಗೆ ಕಣ್ಣಲ್ಲಿ ನೋವು ಹಿಂಸೆ ಮಾಡುವಷ್ಟಿರಬಹುದು. ಕಣ್ಣಲ್ಲಿ ಪಿಸುರು ಇಲ್ಲದಿದ್ದರೂ ಯಥೇಚ್ಛವಾಗಿ ನೀರು ಧಾರಾಕಾರವಾಗಿ ಸುರಿಯುವುದು. ಕಿವಿಯ ಮುಂದುಗಡೆ ಬಟಾಣಿಯ ಗಾತ್ರದ ಗಂಟು ಕಾಣಿಸಿಕೊಳ್ಳುವುದು. ರೋಗಿಯು 'ಫ್ಲೂ' ತಗುಲಿರಬೇಕೆಂದು ಭಾವಿಸುವನು. ಈ ಚಿನ್ಹೆಗಳು ಒಂದೆರಡು ದಿನಗಳಿದ್ದು ಐದು ದಿನಗಳ ಹೊತ್ತಿಗೆ ಹೆಚ್ಚಿ ಅನಂತರ ಹತೋಟಿಗೆ ಬಂದಂತೆ ತೋರುವುದು. ಅನಂತರ ದೃಷ್ಟಿ ಮಾಂದ್ಯ ಕಾಣಿಸುವುದು. ಕಣ್ಣು ಬಹಳಮಟ್ಟಿಗೆ ಊದಿರುವುದು. ದೃಷ್ಟಿಮಾಂದ್ಯವು 3–4 ವಾರಗಳವರೆಗೂ ಇರುವುದು.

ಕಣ್ಣು ನೋಡಲು ಸರಿಯಿದ್ದಂತೆ ಕಂಡರೂ ದೃಷ್ಟಿಮಾಂದ್ಯವು ಇದ್ದೇ ಇರುವುದು. ಕರಿಯ ಗುಡ್ಡೆಯನ್ನು ಪರೀಕ್ಷಿಸಿದಾಗ ಅದರ ಮೇಲೆ ಹೊರಪದರಗಳಲ್ಲಿ ಬಿಳಿಯ ಚುಕ್ಕಿಗಳು ಕಾಣುವುವು. ಬೆಳಕಿನ ಭೀತಿಯು ಹೆಚ್ಚಿ ಕಣ್ಣನ್ನು ಬಿಡಲಾಗುವುದಿಲ್ಲ. ರೋಗದ ಗತಿಯು ಸಾಧಾರಣವಾಗಿ ಆರು ವಾರದಿಂದ ಆರು ತಿಂಗಳವರೆಗೆ ನೂಕಬಹುದು. ಬಿಳಿಯ ಚುಕ್ಕಿಗಳು ಒಂದಕ್ಕೊಂದು ಮಿಶ್ರಣಗೊಂಡು ಕರಿಯ ಗುಡ್ಡೆಯ ಪದರಗಳ ಆಳವನ್ನು ಹೊಕ್ಕು ತಟ್ಟೆಯ ಆಕಾರವನ್ನು ಹೊಂದಬಹುದು.

ಈಜುವ ಕೊಳದಲ್ಲಿ ಈಜುವುದರಿಂದ ಕಣ್ಬೇನೆ ಕಾಣಿಸಿಕೊಳ್ಳುವುದುಂಟು. ಈ ಬಗೆಯ ಕಣ್ಬೇನೆಗೂ 'ವೈರಸ್' ಗುಂಪಿಗೆ ಸೇರಿದ ರೋಗಾಣುವೇ ಕಾರಣವೆಂದು ತಿಳಿದಿದೆ. ಆದುದರಿಂದ ಈಜುವ ಕೊಳದ ನೀರನ್ನು ಪದೇ ಪದೇ ಬದಲಾಯಿಸುವುದು ಅವಶ್ಯಕ. ಇಲ್ಲವೆ ಈಜುವ ಕೊಳದ ನೀರಿಗೆ ಸರಿಯಾದ ಪ್ರಮಾಣದಲ್ಲಿ ಕ್ಲೋರೀನ್ ಬೆರೆಸಿರಬೇಕು.

ಕೆಲವು ಪದಾರ್ಥಗಳ ಸೂಕ್ಷ್ಮತೆಯಿಂದ ಕೆಲವರಲ್ಲಿ ಕಣ್ಗೆಂಪು ಕಾಣಿಸಿಕೊಳ್ಳುವುದುಂಟು. ಕೆಲವರು ಉಪಯೋಗಿಸುವ ಆಹಾರ ಪದಾರ್ಥಗಳಿಗೆ, ತೊಡುವ ಬಟ್ಟೆಗಳಿಗೆ ಸೂಕ್ಷ್ಮತೆಯಿದ್ದಲ್ಲಿ ಕಣ್ಗೆಂಪು ಕಾಣಿಸಿಕೊಳ್ಳುವುದು. ಹುಡುಗಿಯರಲ್ಲಿ ಅವರು ಬಳಸುವ ಶೃಂಗಾರದ ವಸ್ತುಗಳಿಗೆ ಮುಖಕ್ಕೆ ಹಾಕಿಕೊಳ್ಳುವ ಪುಡಿ, ಕೂದಲು ಬಣ್ಣ ಇತ್ಯಾದಿಗಳಿಗೆ ಸೂಕ್ಷ್ಮತೆಯಿದ್ದಲ್ಲಿ ಕಣ್ಗೆಂಪು ಕಾಣಿಸಿಕೊಳ್ಳುವುದು. ಈ ಸ್ಥಿತಿಯಲ್ಲಿ ಎರಡು ಕಣ್ಣುಗಳೂ ಊದಿಕೊಂಡು ಕೆಂಪಾಗುವುವು. ಯಾವ ಪದಾರ್ಥಕ್ಕೆ ಸೂಕ್ಷ್ಮತೆಯಿದೆ ಎನ್ನುವುದನ್ನು ನಿರ್ಧರಿಸುವುದು ಕಷ್ಟ.

ಪಾಪೆಯ ಪರೆಯ ಊತ ಮತ್ತು ಹಠಾತ್ತನೆ ಹೆಂಗಸರಲ್ಲಿ ಕಾಣಿಸಿಕೊಳ್ಳುವ ಕಣ್ಣೊಳಗಿನ ಅಂತರ್ದ್ರವದ ಒತ್ತಡದ ಹೆಚ್ಚು ಕೂಡ ಕಣ್ಗೆಂಪನ್ನು ಉಂಟುಮಾಡುವುವು. ಈ ಎರಡು ಬಗೆಯುವುಗಳಲ್ಲಿ ಕಣ್ಗೆಂಪು ಕರಿಯ ಗುಡ್ಡೆಯ ಸುತ್ತ ಕೇಂದ್ರೀಕೃತವಾಗಿರುವುದು ; ಮತ್ತು ಕಣ್ಣೊಳಗೆ ನೋವೂ ಇರುವುದು. ಕಣ್ಣಿನಲ್ಲಿ ಪಿಸುರು ಇರುವುದಿಲ್ಲ. ನೀರು ಸುರಿಯುವುದು ಪ್ರಧಾನ ಚಿಹ್ನೆ. ಅದರಿಂದ ಕಣ್ಗೆಂಪು ಕಂಡ ಒಡನೆಯೇ ಸಾಧಾರಣ ಕಣ್ಣು ನೋವೆಂದು ಉದಾಸೀನಮಾಡದೆ ನೇತ್ರ ಚಿಕಿತ್ಸಕರನ್ನು ಕಂಡು ಸಲಹೆಯನ್ನು ಪಡೆಯುವುದು ಒಳ್ಳೆಯದು. ಉದಾಸೀನ ಮಾಡಿದಲ್ಲಿ ಕುರುಡನ್ನು ಅಪ್ಪಬೇಕಾಗುವುದು.

## 2. ಝಿಲ್ಲಿಕಾ ಸಂಧಿ ಪರೆಯೂತ

ಇದು ಕೂಡ ಮಕ್ಕಳಲ್ಲಿ ಕಾಣಿಸಿಕೊಳ್ಳುವ ಸೋಂಕುಳ್ಳ ಕಣ್ಣಿನ ರೋಗ. ಕಣ್ಣಿನ ಒಳರೆಪ್ಪೆಯ ಮೇಲೆ ಒಂದು ತೆರನಾದ

ತೆಳುವಾದ ಬೆಳ್ಪರೆ ಕವಿದಿರುವುದು. ಇದರಲ್ಲಿ ಎರಡು ಬಗೆ
ಯುಂಟು :

[1] ಡಿಫ್ತಿರಿಯಾ ಬ್ಯಾಕ್ಟೀರಿಯಾಣುಕಾರವುಳ್ಳದ್ದು.

[2] ಸ್ಟ್ರೆಪ್ಟೋಕೋಕಸ್, ನ್ಯೂಮೋಕೋಕಸ್, ಗೋನೋ-
ಕೋಕಸ್ ಮತ್ತು 'ವೈರಸ್' ರೋಗಾಣುಕಾರವುಳ್ಳದ್ದು.

ಈ ಎರಡು ಬಗೆಗಳ ರೋಗದ ಗತಿಯು ಸಾಧಾರಣ ಇಲ್ಲವೇ
ತೀವ್ರತೆಯ ಸ್ವರೂಪವನ್ನು ತಾಳಬಹುದು.

ಈ ರೋಗವು ಸಾಧಾರಣವಾಗಿ ಎರಡರಿಂದ ಐದು ವರ್ಷದ
ಮಕ್ಕಳಲ್ಲಿ ಕಾಣಿಸಿಕೊಳ್ಳುವುದು. ಇದರ ವಾಹಕ ಕ್ಲೆಬ್ ಲಾಫ್ಲರ್
ಬ್ಯಾಕ್ಟೀರಿಯಾಣು ಎಂದು ತಿಳಿದಿದೆ. ಗಂಟಲು ನೋವಾದಾಗ
ಇಲ್ಲವೆ ಮಗುವಿಗೆ 'ದಡಾರ' ಎದ್ದಾಗ ಈ ರೋಗ ಸುಲಭವಾಗಿ
ತಗಲುತ್ತದೆ.

ರೋಗದ ಲಕ್ಷಣಗಳು : ತಲೆನೋವು, ದೇಹಾಲಸ್ಯ, ಜ್ವರ,
ಗಂಟಲುನೋವು, ಮೂಗಿನಲ್ಲಿ ಕೆಟ್ಟವಾಸನೆ, ಉಗುಳು ನುಂಗಲು
ಆಗದಿರುವುದು, ಉಸಿರಾಡುವಾಗ ಗಂಟಲಲ್ಲಿ ಶಬ್ದ, ಗಂಟಲು
ಮೂಗಿನಿಂದ ರಕ್ತಸ್ರಾವ–ಇವೆಲ್ಲಾ ಈ ರೋಗದ ಲಕ್ಷಣಗಳು.
ಕಣ್ಣಿಗೆ ಈ ರೋಗ ತಗುಲಿದಾಗ ಈ ಲಕ್ಷಣಗಳ ಜೊತೆಗೆ ಕಣ್ಣಿನ
ರೆಪ್ಪೆಗಳು ಊದಿಕೊಂಡು, ಕೆಂಪಗೆ, ಮತ್ತು ಮುಟ್ಟಲು ಬೆಚ್ಚಗೆ
ಇರುವುವು. ಕಣ್ಣಿನ ಸಂಧಿಪರೆಯು ಊದಿಕೊಂಡು ಬೂದು
ಹಳದಿಯ ದ್ರವದಿಂದ ಕವಿದಿರುವುದು. ಇದರ ಪರಿಣಾಮವಾಗಿ
ರೆಪ್ಪೆಗಳು ದಪ್ಪನಾಗಿ ಹೊರಕ್ಕೆ ಮಡಿಚಲಾಗುವುದಿಲ್ಲ. ಸ್ರವಿಸು
ತ್ತಿರುವ ದ್ರವದ ಒತ್ತಡವು ಹೆಚ್ಚಿ ಸುತ್ತಲಿರುವ ಅಂಗಾಂಶವು

ಕೀತು, ಬೇರ್ಪಟ್ಟು ಪ್ರದೇಶವು ಒರಟಾಗುವುದು. ಕ್ರಮೇಣ ಹೊರಸೂಸುವ ದ್ರವವು ಹೆಚ್ಚಿ ಕೀವಾಗಿ ಸುರಿಯುವುದು. ಡಿಫ್ತಿರಿಯಾ ರೋಗಾಣುವು ಕರಿಯ ಗುಡ್ಡೆಯನ್ನು ನೇರವಾಗಿ ಮುತ್ತುವ ಶಕ್ತಿಯುನ್ನು ಹೊಂದಿರುವುದರಿಂದ ಕರಿಯ ಗುಡ್ಡೆಯ ಮೇಲೆ ವ್ರಣಗಳು ಕಾಣಿಸಿಕೊಳ್ಳುವುವು. ಕಿವಿಯ ಮುಂದೆ ಇರುವ ಲಿಂಫ್ ಗ್ರಂಥಿಯು ಊದಿಕೊಂಡು ಕೀತುಕೊಳ್ಳಬಹುದು.

ದುಷ್ಪರಿಣಾಮಗಳು :

[1] ಕರಿಯ ಗುಡ್ಡೆಯ ಮೇಲೆ ವ್ರಣಗಳು ಕಾಣಿಸಿಕೊಂಡು, ತೂತಾಗಿ ಗುಳಿಗಣ್ಣು ಇಲ್ಲವೆ ದ್ರಾಕ್ಷಿಗಣ್ಣು ಆಗಬಹುದು. ಇದರಿಂದ ದೃಷ್ಟಿನಾಶವಾಗಿ ಕುರುಡುಂಟಾಗುವುದು.

[2] ರೆಪ್ಪೆಗೂ, ಕಣ್ಣುಗಡ್ಡೆಗೂ ಸಂಧಿ ಪರೆಯು ಅಂಟಿಕೊಂಡು ಗುಡ್ಡೆಯ ಚಲನವಲನಗಳಿಗೆ ಅಡ್ಡಿಯನ್ನುಂಟುಮಾಡುವುದು.

[3] ರೆಪ್ಪೆಯು ವಕ್ರವಾಗಿ ಒಳಕ್ಕೆ ತಿರುಗಿಕೊಂಡುದರ ಪರಿಣಾಮವಾಗಿ ರೆಪ್ಪೆಯ ಕೂದಲುಗಳು ವಕ್ರತೆಯನ್ನು ತಾಳುವುವು.

[4] ಕಣ್ಣುಗುಡ್ಡೆಯ ಹೊರ ಮಾಂಸಖಂಡಗಳಿಗೂ ಲಕ್ವ ಹೊಡೆದು ದ್ವಿದೃಷ್ಟಿಯುಂಟಾಗುವುದು.

[5] ನೋಡಲು ದೂರಕ್ಕೆ ಹೊಂದಿಸುವ ಶಕ್ತಿಯು ಕುಗ್ಗಿ ಓದಲಾಗುವುದಿಲ್ಲ.

[6] ಪಾಪೆಯು ಹಿಗ್ಗಿರಬಹುದು.

-ಇವೆಲ್ಲಾ ಮೂರನೆಯ ವಾರದಲ್ಲಿ ಕಾಣಿಸಿಕೊಳ್ಳಬಹುದು.

ಚಿಕಿತ್ಸೆ : ರೋಗಿಯನ್ನು ಕೂಡಲೇ ಪ್ರತ್ಯೇಕಿಸಬೇಕು. ಮೂರು ವಾರಗಳವರೆಗೆ ಶಾಲೆಗೆ ಮಗುವನ್ನು ಕಳುಹಿಸಬಾರದು. ಚಿಕಿತ್ಸೆ ಆದಷ್ಟು ಹಾಸಿಗೆಯಲ್ಲೇ ನಡೆಯಬೇಕು. ರೋಗ ಗೊತ್ತಾದ ಕೂಡಲೇ 10 ರಿಂದ 20 ಸಾವಿರ ಯೂನಿಟ್‌ಗಳಷ್ಟು ವಿಷಘ್ನ ಗಳನ್ನು ಚುಚ್ಚುಮದ್ದು ಕೊಡಬೇಕು. ಕಣ್ಣಿನೊಳಕ್ಕೆ ಪೆನಿಸಿಲಿನ್ ತೊಟ್ಟುಗಳನ್ನು. ವಿಷಘ್ನ ತೊಟ್ಟುಗಳನ್ನು ಬಿಡಬೇಕು. ನೇತ್ರ ಚಿಕಿತ್ಸಕರನ್ನು ಕಂಡು ಕೂಡಲೇ ಸಲಹೆ ಪಡೆಯಬೇಕು.

ಸ್ಟ್ರೆಪ್ಟೊಕೋಕಸ್ ರೋಗಕಾರಕವುಳ್ಳ ಕಣ್ಣಿನೋವೂ ಕೂಡ ದುರಂತ ಗತಿಯನ್ನು ತರಬಹುದು. ಸ್ವಲ್ಪ ಔಷಧಿಗಳನ್ನು ಪೂರ್ಣ ಪ್ರಮಾಣದಲ್ಲಿ ಬಾಯಿಂದ ಕೊಡಬೇಕು. ಕಾಲುಗಂಟೆಗೊಮ್ಮೆ ಪೆನಿಸಿಲಿನ್ ತೊಟ್ಟುಗಳನ್ನು ಕಣ್ಣೊಳಕ್ಕೆ ಬಿಡಬೇಕು.

ಡಿಫ್ತೀರಿಯಾವು ತಡೆಗಟ್ಟಬಹುದಾದ ರೋಗ. ರೋಗ ಬರ ದಂತೆ ಮಕ್ಕಳಿಗೆ ಡಿಫ್ತೀರಿಯಾ ರೋಗ ನಿರೋಧಕ ಚುಚ್ಚು ಮದ್ದನ್ನು ಕೊಡಿಸಬೇಕು. ಸಕಾಲದಲ್ಲಿ ಮಕ್ಕಳಿಗೆ ಟ್ರಿಪಲ್ ಆಂಟಿ ಜೆನ್ ಚುಚ್ಚುಮದ್ದನ್ನು ಕೊಡಿಸುವುದರಿಂದ, ಡಿಫ್ತೀರಿಯಾ, ಟೆಟನಸ್ ಮತ್ತು ನಾಯಿಕೆಮ್ಮು – ಈ ರೋಗಗಳಿಂದ ರಕ್ಷಣೆ ಪಡೆಯಬಹುದು.

### 3. ಕ್ಷಯದ ಹಿನ್ನೆಲೆಯುಳ್ಳ ಸಂಧಿಪರೆಯ ಊತ

ಇದು ಕರಿಯ ಗುಡ್ಡೆಗೂ ಆವರಿಸಿಕೊಳ್ಳಬಹುದು. ಇದು ಸಾಧಾರಣವಾಗಿ ಕರಿಯ ಗುಡ್ಡೆ ಮತ್ತು ಬಿಳಿಯ ಗುಡ್ಡೆ ಸೇರುವ ಅಂಚಿನಲ್ಲಿ ಒಂದು ರಾಗಿಯ ಕಾಳಿನಷ್ಟು ಗಾತ್ರ ಹಳದಿ ಅಥವಾ ಬೂದು ಬಣ್ಣದ ಗುಳ್ಳೆಯಂತೆ ಕಾಣಿಸಿಕೊಳ್ಳುವುದು. ಇದರ ಸುತ್ತ ಕೆಂಪು ಬಣ್ಣವು ಎದ್ದು ಕಾಣುವುದು. ಇದನ್ನು ಫ್ಲೆಕ್ಟನ್

ಎಂದು ಕರೆಯುವರು. ಇದು ಕ್ರಮೇಣ ಕರಿಯ ಗುಡ್ಡೆಯನ್ನು ಆವರಿಸಿ, ಅದರ ಪಾರದರ್ಶಕತೆಯನ್ನು ಹಾಳುಮಾಡಿ, ದೃಷ್ಟಿ ಮಾಂದ್ಯವನ್ನುಂಟುಮಾಡುವುದು. ಇದು ಬಿಳಿಯ ಗುಡ್ಡೆಯ ಮೇಲೂ ಕಾಣಿಸಿಕೊಳ್ಳಬಹುದು. ಜೊತೆಗೆ ಬ್ಯಾಕ್ಟೀರಿಯಾಣುಗಳ ಸಂಪರ್ಕಹೊಂದಿ ಕಣ್ಣು ಪಿಸುರು ಕಟ್ಟಿಕೊಳ್ಳಬಹುದು. ಒಂದ ಕ್ಕಿಂತಲೂ ಹೆಚ್ಚಾಗಿ ಕರಿಯ ಗುಡ್ಡೆಯ ಸುತ್ತ ಉಂಗುರದ ಮಾದರಿಯಲ್ಲಿ ಗುಳ್ಳೆಗಳು ಕಾಣಿಸಿಕೊಳ್ಳಬಹುದು, ಹಳೆಯವು ಮಾದಂತೆ ಹೊಸವು ತಲೆಹಾಕಬಹುದು. ಹೀಗೆ ಮಾಯುತ್ತಾ, ಮರಳಿ ಕಾಣಿಸಿಕೊಳ್ಳುತ್ತಾ ರೋಗವು ತಿಂಗಳುಗಟ್ಟಲೆ ಕಾಡುತ್ತಾ ಹೋಗಬಹುದು.

ರೋಗದ ಕಾರಕವು 'ಕ್ಷಯದ ಸೂಕ್ಷ್ಮತೆ' ಎಂದು ನಂಬ ಲಾಗಿದೆ. ಗುಳ್ಳೆಯಲ್ಲಿ ಕ್ಷಯಾಣುವನ್ನು ಪ್ರದರ್ಶಿಸಲಾಗುವುದಿಲ್ಲ. ಇದು ಸಾಧಾರಣವಾಗಿ ಮಕ್ಕಳಲ್ಲಿ ಕಾಣಿಸಿಕೊಳ್ಳುತ್ತದೆ.

ರೋಗದ ಲಕ್ಷಣಗಳು: ಕಣ್ಣಲ್ಲಿ ನೀರು ಸುರಿಯುವುದು; ಬೆಳಕಿನ ಭೀತಿಯಿಂದ ಮಗುವು ಮುಖವನ್ನು ಕೆಳಕ್ಕೆಮಾಡಿ ಮುಚ್ಚಿ ಕೊಳ್ಳುವುದು. ಕರಿಯ ಗುಡ್ಡೆಯನ್ನು ಆವರಿಸಿದಾಗ ಕುಕ್ಕ ನೋವು, ಬೆಳಕಿನ ಭೀತಿ ಮತ್ತು ನವೆ ಕಾಣಿಸಿಕೊಳ್ಳುವುದು. ನೀರು ಸುರಿಯುವುದು ಹೆಚ್ಚುವುದು. ಗುಳ್ಳೆಗಳು ಸಂಧಿಪರೆಯ ಮೇಲೆ ವ್ರಣವಾಗಿ ಯಾವ ಕಲೆಯನ್ನೂ ಬಿಡದೆ ಮಾಯುವಾಗ ಬಹುದು. ಕರಿಯ ಗುಡ್ಡೆಯ ಮೇಲೆ ರಕ್ತನಾಳಗಳು ಬೆರೆತ ಬೆಳ್ಪರೆ ಕಾಣಿಸಿಕೊಳ್ಳಬಹುದು. ಕರಿಯ ಗುಡ್ಡೆಯ ಮೇಲೆ ಗುಳ್ಳೆ ಕಂಡಾಗ ಬ್ಯಾಕ್ಟೀರಿಯಾಣುಗಳ ಸಂಪರ್ಕಹೊಂದಿ ಕೀತು ವ್ರಣ ವಾಗಿ ಬಿರಿದು ದ್ರಾಕ್ಷಿಗಣ್ಣಾಗಬಹುದು. ಈ ರೋಗವು ಸಾಧಾ ರಣವಾಗಿ ಬೆಳವಣಿಗೆಯಲ್ಲಿ ಮೊಟಕಾಗಿರುವ, ದೃಢಕಾಯರಲ್ಲದ

ಪದೇ ಪದೇ ರೋಗಗಳಿಗೆ ಬಲಿಯಾಗುತ್ತಿರುವ ಶಕ್ತಿಹೀನ ಮಕ್ಕಳಲ್ಲಿ ಕಾಣಿಸಿಕೊಳ್ಳುವುದು. ಕುತ್ತಿಗೆಯ ಲಿಂಫ್ ಗ್ರಂಥಿಗಳು ಊದಿಕೊಂಡಿರಬಹುದು. ಚರ್ಮರೋಗ, ಶೀತ, ಕಿವಿಯಲ್ಲಿ ಕೀವು ಸುರಿಯುವುದು, ರೆಪ್ಪೆಯ ಅಂಚಿನ ಊತ—ಇವೆಲ್ಲಾ ಬೆರೆತಿರಬಹುದು. ಜೊತೆಗೆ ಕ್ಷಯದ ಸೋಂಕೂ ಇರಬಹುದು.

ಚಿಕಿತ್ಸೆ : ಪುಷ್ಟಿಯುಕ್ತ ಆಹಾರ, ಟಾನಿಕ್‌ಗಳು, ಆರೋಗ್ಯಕರ ಸನ್ನಿವೇಶ, ಒಳ್ಳೆಯ ಗಾಳಿ ಬೆಳಕು—ಇವು ರೋಗವನ್ನು ಹಿಮ್ಮೆಟ್ಟಿಸುವ ಸಾಧನಗಳು. ಜೊತೆಗೆ ಬೆರೆತಿರುವ ರೋಗಗಳಿಗೆ ಗಮನ ಕೊಡಬೇಕು. ಕ್ಷಯದ ಸೊಂಕು ಇದ್ದಲ್ಲಿ ಕ್ಷಯದ ಚಿಕಿತ್ಸೆ ಅಗತ್ಯ. ತಂಪು ಕಪ್ಪು ಕನ್ನಡಕಗಳು ಕಣ್ಣಿಗೆ ಹಿತವನ್ನುಂಟು ಮಾಡುವುವು. ನೇತ್ರ ವೈದ್ಯರನ್ನು ಕಂಡು ಸರಿಯಾದ ಚಿಕಿತ್ಸೆ ಪಡೆಯಬೇಕು. ಕಣ್ಣಿಗೆ ಕಾರ್ಟಿಸೋನ್ ತೊಟ್ಟುಗಳು ಮತ್ತು ಮುಲಾಮುಗಳು ಫಲಕಾರಿಯೆಂದು ಕಂಡುಬಂದಿದೆ. ಇವುಗಳನ್ನು ನೇತ್ರ ವೈದ್ಯರ ಸಲಹೆ ಇಲ್ಲದೆ ಹೆಚ್ಚುಕಾಲ ಉಪಯೋಗಿಸಬಾರದು.

## 4. ಕರಿಯ ಗುಡ್ಡೆಯ ಮಧ್ಯ ಪದರಗಳ ಊತ

ಇದು ಸಾಧಾರಣವಾಗಿ ಐದರಿಂದ ಹದಿನೈದು ವರ್ಷದ ಒಳಗಿನ ಮಕ್ಕಳಲ್ಲಿ ಕಾಣಿಸಿಕೊಳ್ಳುವ ಕರಿಯ ಗುಡ್ಡೆಗೆ ಸಂಬಂಧಪಟ್ಟ ಕಣ್ಣಿನ ರೋಗ. ಕ್ಷಯ, ಕುಷ್ಟ, ಮತ್ತು ಪರಂಗಿ ರೋಗದ ರೋಗಾಣುಗಳು ಈ ರೋಗದ ವಾಹಕಗಳೆಂದು ತಿಳಿದುಬಂದಿದೆ. ಈ ರೋಗವು ಪಾಪೆಯ ಪರೆ ಊತದಿಂದ ಆರಂಭವಾಗುವುದು. ತಂದೆತಾಯಿಗಳ ಮೇಹವ್ಯಾಧಿಯ ಸೋಂಕಿನ ದೋಷದಿಂದ ಹುಟ್ಟಿದ ಮಕ್ಕಳ ಕಣ್ಣುಗಳಲ್ಲಿ ಈ ರೋಗದ ಸೋಂಕು ಕಂಡು

ಶಾಲೆಗೆ ಸೇರುವ ವಯಸ್ಸು ಮುಟ್ಟಿದಾಗ ಕರಿಯ ಗುಡ್ಡೆಯ ಪಾರದರ್ಶಕತೆಗೆ ಲೋಪ ಬಂದು, ಕರಿಯ ಗುಡ್ಡೆಯ ಬೆಳ್ಳಗಾಗುವುದು. ಈ ರೋಗವು ಎರಡು ಕಣ್ಣುಗಳಿಗೂ ತಗುಲುವುದುಂಟು. ಮೊದಲು ಒಂದು ಕಣ್ಣಲ್ಲಿ ಕಾಣಿಸಿಕೊಂಡು, ಕೆಲವು ತಿಂಗಳುಗಳ ಇಲ್ಲವೆ ವರ್ಷಗಳ ನಂತರ ಇನ್ನೊಂದು ಕಣ್ಣಲ್ಲಿ ಕಾಣಿಸಿಕೊಳ್ಳಬಹುದು. ಜೊತೆಗೆ ಪರಂಗಿ ರೋಗದ ಚಿನ್ಹೆಗಳಾದ ಚೌಕಾಕಾರದ ಹಣೆ, ಎದ್ದುಕಾಣುವ ಹಣೆಯ ಮೇಲಿನ ದಿಬ್ಬಗಳು, ಚಪ್ಪಟೆಯಾಗಿ ಹಳ್ಳಬಿದ್ದಿರುವ ಮೂಗು, ಬಾಯಿಯ ಇಕ್ಕೆಲದಲ್ಲಿ ಕಲೆಗಳು, ಉದ್ದನೆಯ ಮೂಳೆಗಳ ಮೇಲೆ ಗಂಟುಗಳು, ಕಿವುಡು, ಮುಕ್ಕಾದ ಹಲ್ಲಿನ ಅಂಚುಗಳು ಬೆರೆತಿರಬಹುದು.

ರೋಗದ ಲಕ್ಷಣಗಳು : ಕರಿಯ ಗುಡ್ಡೆಯ ಮಧ್ಯದಲ್ಲಿ ಇಲ್ಲವೆ ಅಂಚಿನಲ್ಲಿ ಬಿಳಿಯ ಚುಕ್ಕಿಗಳು ಕಾಣಿಸಿಕೊಂಡು, ಕ್ರಮೇಣ ಒಂದಕ್ಕೊಂದು ಕಲೆತು, ದೊಡ್ಡವಾಗಿ, ಕರಿಯ ಗುಡ್ಡೆಯನ್ನು ಪೂರ್ಣವಾಗಿ ಕವಿಯುವುದು. ಕರಿಯ ಗುಡ್ಡೆಯ ಹಿಂದಿರುವ ಪಾಪೆಯ ಪರೆಯನ್ನು ನೋಡಲಾಗುವುದಿಲ್ಲ. ದೃಷ್ಟಿಯು ಬಹುಮಟ್ಟಿಗೆ ಇಳಿಮುಖವಾಗಿ ಬೆಳಕನ್ನು ಮಾತ್ರ ಗುರುತಿಸುವಷ್ಟು ಉಳಿಯಬಹುದು. ಕರಿಯ ಗುಡ್ಡೆಯು ನೋಡಲು ಮಸುಕಾದ ಗಾಜಿನಂತಿರುವುದು. ಕರಿಯ ಗುಡ್ಡೆಯ ಒಳಪದರಗಳಲ್ಲಿ ಪರಕೆಯಾಕಾರದ ರಕ್ತನಾಳಗಳು ಕಾಣಿಸಿಕೊಂಡು ಸಾಲ್ಮನ್ ಮೀನಿನ ಕೆಂಪು ಬಣ್ಣವನ್ನು ಹೋಲುವುದು. ಈ ಹಂತದಲ್ಲಿ ಕಣ್ಣಲ್ಲಿ ನೀರು ಸುರಿಯುವುದು, ಬೆಳಕು ನೋಡಲು ಭೀತಿ, ಕಣ್ಣೊಳಗೆ ನೋವು ಮತ್ತು ಕಣ್ಗೆಂಪು ಇರುವುದು. ಕರಿಯ ಗುಡ್ಡೆಯ ಸುತ್ತ ಕಣ್ಗೆಂಪು ಕೇಂದ್ರೀಕರಿಸಿರುವುದು. ಈ ಹಂತವು ಎರಡರಿಂದ ಮೂರು

ತಿಂಗಳವರೆಗೆ ಇರಬಹುದು. ಕಣ್ಣು ನೋಡಲು ಭಯವಾಗು ವುದು.

ಕ್ರಮೇಣ ಬಿಳುಪು ಮತ್ತು ಕಣ್ಣಿನ ಕೆಂಪು ಕಡಿಮೆಯಾಗುತ್ತಾ ಬರುವುದು. ರಕ್ತನಾಳಗಳು ಕೂಡ ಕುಗ್ಗಿ ಬರಿದಾಗುವುವು. ದೃಷ್ಟಿಯೂ ಕೂಡ ಉತ್ತಮವಾಗುವಂತೆ ಕಂಡರೂ ಮೊದಲಿನ ಸ್ಥಿತಿಗೆ ಬರುವುದಿಲ್ಲ. ಕರಿಯ ಗುಡ್ಡೆಯು ತೆಳುವಾಗುವುದು. ಪಾಪೆಯವರೆಗೂ ಮತ್ತು ಮಸೂರಕ್ಕೂ ಅಂಟಿರುವ ದಾರಗಳು ಗೋಚರವಾಗುವುವು. ಈ ಉತ್ತಮಗೊಳ್ಳುವ ಹಂತವು ಕೆಲವು ತಿಂಗಳುಗಳವರೆಗೆ ಹಿಡಿಸುವುದು. ಕೊನೆಗೆ ಕರಿಯ ಗುಡ್ಡೆಯ ಮೇಲೆ ಬಿಳುಪಿನ ಕಲೆಗಳು ಶಾಶ್ವತವಾಗಿ ನಿಲ್ಲಬಹುದು. ಕರಿಯ ಗುಡ್ಡೆಯು ಮುಂದಕ್ಕೆ ಬಾಗಿರುವುದರಿಂದ ಹತ್ತಿರ ದೃಷ್ಟಿಯುಂ ಟಾಗಬಹುದು.

ಚಿಕಿತ್ಸೆ : ರೋಗ ಮಕ್ಕಳಲ್ಲಿ ಕಾಣಿಸಿಕೊಂಡ ಕೂಡಲೇ ನೇತ್ರ ಚಿಕಿತ್ಸಕರ ಸಲಹೆಯನ್ನು ಪಡೆಯಬೇಕು. ಕ್ಷಯದ ಹಿನ್ನೆಲೆಯಿದ್ದಲ್ಲಿ ಅದಕ್ಕೂ ಚಿಕಿತ್ಸೆಯಾಗಬೇಕು. ಪರಂಗಿ ರೋಗದ ಹಿನ್ನೆಲೆಯಿದ್ದಲ್ಲಿ ಪರಂಗಿ ರೋಗಕ್ಕೆ ಪೂರ್ಣ ಚಿಕಿತ್ಸೆ ಅಗತ್ಯ. ಕಣ್ಣಿನೊಳಕ್ಕೆ 1% ಆಟ್ರೋಪಿನ್ ತೊಟ್ಟುಗಳು, ಕಾರ್ಟಿಸೋನ್ ತೊಟ್ಟುಗಳು ಮತ್ತು ಮುಲಾಮುಗಳು ಫಲಕಾರಿಯೆಂದು ಕಂಡುಬಂದಿವೆ. ಕಪ್ಪು ಕನ್ನಡಕ ಗಳು ಬೆಳಕಿನ ಭೀತಿಯನ್ನು ತಪ್ಪಿಸಿ ಕಣ್ಣಿಗೆ ಹಿತವನ್ನುಂಟು ಮಾಡುವುವು. ಕರಿಯ ಗುಡ್ಡೆಯ ಮೇಲಿನ ಬಿಳಿಯ ಕಲೆಗಳಿಗೆ ಶವದ ಕರಿಯ ಗುಡ್ಡೆಯ ಕಸಿಯ ಶಸ್ತ್ರಚಿಕಿತ್ಸೆ ನಡೆಸಬಹುದು.

# 6. ಹುಡುಗರಲ್ಲಿ ಕುರುಡನ್ನುಂಟುಮಾಡುವ ರೋಗಗಳು

## 1. ಪಾಪೆಯ ಪರೆಯ ರೋಗ (Iridocyclitis)

ಇದಕ್ಕೆ ಹಲವಾರು ಕಾರಣಗಳುಂಟು. ಈ ರೋಗವೂ ಕೂಡ ಕಣ್ಗೆಂಪಿಂದ ಆರಂಭವಾಗುವುದು. ಕರಿಯ ಗುಡ್ಡೆಯ ಸುತ್ತ ಕೆಂಪು ಕೇಂದ್ರೀಕರಿಸಿರುವುದು. ನೀರು ಕಣ್ಣಿಂದ ಸುರಿಯುವುದು. ಕಣ್ಣೊಳಗೆ ಮೂಕನೋವು ಕಾಣಿಸಿಕೊಳ್ಳುವುದು. ಉದಾಸೀನ ಮಾಡಿದಲ್ಲಿ ದೃಷ್ಟಿನಾಶವು ಖಂಡಿತ. ಹೊರಗೆ ಯಾವ ಚಿನ್ಹೆಯೂ ಇಲ್ಲದೆ ಕಣ್ಣೊಳಗೆ ರೋಗವಿರಬಹುದು. ದೇಹದ ಆಂತರಿಕ ರೋಗಗಳು ಪಾಪೆಯ ಪರೆಯ ರೋಗಗಳನ್ನುಂಟು ಮಾಡ ಬಲ್ಲವು. ಈ ಗುಂಪಿಗೆ ದೃಷ್ಟಿಪಟಲ ಮತ್ತು ಕೊರಾಯಿಡ್ ಪದರಗಳ ರೋಗಗಳು ಸೇರಿರುತ್ತವೆ. ಇದರಿಂದುಂಟಾಗುವ ದೃಷ್ಟಿ ಮಾಂದ್ಯವು ಮಗುವಿಗೆ ತಿಳಿಯದಂತೆಯೇ ಇರಬಹುದು. ಕ್ಷಯ ಸಂಬಂಧದ ಕೊರಾಯಿಡ್ ಪದರದ ಊತವೂ ಈ ಸ್ಥಿತಿ ಯನ್ನುಂಟು ಮಾಡಬಲ್ಲದು. ಆದುದರಿಂದ ಹುಡುಗರಲ್ಲಿ ಕಣ್ಗೆಂಪು ಕಾಣಿಸಿಕೊಂಡಲ್ಲಿ ಸಾಧಾರಣ ಕಣ್ಣು ನೋವೆಂದು ಉದಾಸೀನ ಮಾಡದೆ ನೇತ್ರ ವೈದ್ಯರನ್ನು ಕಂಡು ಚಿಕಿತ್ಸೆ ನಡೆಸ ಬೇಕು. ಶ್ವಾಸಕೋಶದ ರೋಗವು ಕೂಡ ಒಂದು ಬಗೆಯ ಪಾಪೆಯ ರೋಗವನ್ನುಂಟುಮಾಡಬಲ್ಲದು.

## 2. ರಾತ್ರಿಯ ಕುರುಡು (Retinitis pigmentosa)

ಇದು ದೃಷ್ಟಿಪಟಲದಲ್ಲಿರುವ ಬಣ್ಣದ ವಸ್ತುವಿಗೆ ಸಂಬಂಧಿ ಸಿದುದು. ಇದಕ್ಕೆ ಆನುವಂಶೀಯ ತಳಹದಿ ಇದೆ. ಇದು ಎರಡು

ಕಣ್ಣುಗಳಲ್ಲೂ ಕಾಣಿಸಿಕೊಳ್ಳುವುದು. ಹತ್ತಿರದ ರಕ್ತಸಂಬಂಧಿಗಳಲ್ಲಿ ವಿವಾಹವಾದರೆ ತಂದೆತಾಯಿಗಳಲ್ಲಿ ಯಾರಿಗಾದರೂ ಈ ರೋಗವಿದ್ದಲ್ಲಿ ಹುಟ್ಟುವ ಮಕ್ಕಳಲ್ಲೂ ಈ ರೋಗ ಕಾಣಿಸಿಕೊಳ್ಳುವ ಸಂಭವವುಂಟು. ಹೆಣ್ಣುಗಂಡುಗಳಿಬ್ಬರೂ ಈ ರೋಗಕ್ಕೆ ಗುರಿಯಾಗಬಲ್ಲರು.

ರೋಗದ ಲಕ್ಷಣ : ರೋಗಿಯು ರಾತ್ರಿಯ ಹೊತ್ತು ಪದಾರ್ಥಗಳು ಸರಿಯಾಗಿ ಕಾಣಿಸುವುದಿಲ್ಲವೆನ್ನುವನು. ರೋಗವು ಹುಟ್ಟಿದಾಗಲೇ ಇದ್ದಿರಬಹುದಾದರೂ ಮಗು ಬೆಳೆದಂತೆ ರೋಗವು ನಿಧಾನವಾಗಿ ಬೆಳೆಯುತ್ತಾ ಹದಿನೈದರ ವಯಸ್ಸಿಗೆ ಚಿನ್ಹೆಗಳು ಕಾಣಿಸಿಕೊಳ್ಳುವುವು. ಇಪ್ಪತ್ತರ ವಯಸ್ಸಿಗೆ ಪೂರ್ಣ ಕುರುಡಾಗುವ ಸಂಭವವುಂಟು. ರೋಗ ಪೊತ್ತ ವ್ಯಕ್ತಿಯ ಅಣ್ಣತಮ್ಮ, ಅಕ್ಕತಂಗಿ, ತಂದೆತಾಯಿ ಇವರೆಲ್ಲರನ್ನೂ ಸೂಕ್ಷ್ಮ ಪರೀಕ್ಷೆಗೆ ಗುರಿಪಡಿಸಿ ರೋಗದ ಆನುವಂಶಿಕೆಯನ್ನು ಅಭ್ಯಸಿಸಿ ಸಲಹೆಯನ್ನು ಕೊಡಬೇಕಾಗುತ್ತದೆ. ಈ ಸ್ಥಿತಿಯು ಹಲವು ವೇಳೆ ಕಣ್ಪೊರೆಯಿಂದ ಕೂಡಿರುವುದುಂಟು. ಕಣ್ಪೊರೆಗೆ ಶಸ್ತ್ರಚಿಕಿತ್ಸೆ ನಡೆಸಿದರೂ ದೃಷ್ಟಿಯು ಉತ್ತಮಗೊಳ್ಳುವುದಿಲ್ಲ.

ಚಿಕಿತ್ಸೆ : ಫಲದಾಯಕವಾಗಿಲ್ಲ. ಕುರುಡು ಬಾಳಿಗೆ ಗಂಟು ಬಿದ್ದಿರುವುದರಿಂದ ಕೆಲಸಕ್ಕೆ ಸರಿಹೊಂದಿಸುವ ಶಾಖೆಯ ಸಲಹೆ ಅಗತ್ಯ. ದೃಷ್ಟಿ ನಾಶವಾಗುವ ಹೊತ್ತಿಗೆ ಇವರು ಯಾವುದಾದರೂ ದೃಷ್ಟಿಯ ಸಹಾಯವಿಲ್ಲದೆ ಮಾಡುವಂತಹ ಕಸುಬುಗಳನ್ನು ಕಲಿಯುವುದು ಒಳ್ಳೆಯದು. ಆನುವಂಶಿಕೆಯಲ್ಲಿ ಪ್ರಬಲ ಜನ್ಮಬಿಂದುವಿನ ಸೂಚಿಕೆಯಿದ್ದಲ್ಲಿ ತಂದೆತಾಯಿಗಳಿಗೆ ಮಕ್ಕಳಾಗದಂತೆ ನೋಡಿಕೊಳ್ಳಬೇಕೆನ್ನುವ ಸಲಹೆ ಕೊಡಬೇಕಾಗುತ್ತದೆ. ಹತ್ತಿರ ರಕ್ತಸಂಬಂಧಿಗಳೊಂದಿಗೆ ವಿವಾಹವನ್ನು ನಿಷೇಧಿಸುವುದು

ಮುಂದಿನ ಪೀಳಿಗೆಯುವರಲ್ಲಿ ರೋಗ ತಲೆದೋರದಂತೆ ಮಾಡುವ ದೃಷ್ಟಿಯಿಂದ ಒಳ್ಳೆಯದು.

3. ಆಟಪಾಟಗಳಿಂದಾಗುವ ಕಣ್ಣಿನ ಗಾಯಗಳು

ಮಕ್ಕಳ ಆಟದ ಸಾಮಾನುಗಳನ್ನು ಆರಿಸುವುದರಲ್ಲಿ ಬಹಳ ಜಾಗ್ರತೆಯಿರಬೇಕು. ಎಷ್ಟೋ ಬಾರಿ ಮಕ್ಕಳ ಕಣ್ಣುಗಳಿಗೆ ಅವರು ಆಡುತ್ತಿರುವ ಆಟದ ಸಾಮಾನುಗಳಿಂದಲೇ ಅಪಾಯಗಳು ಆಗುವುದುಂಟು. ಈ ರೀತಿ ಆಗುವ ಅಪಾಯಗಳಿಂದ ಕಣ್ಣು ಕುರುಡಾಗುವುದುಂಟು. ಮಕ್ಕಳು ತಿಳಿದೋ, ತಿಳಿಯದೆಯೋ ಬಳಸುವ ಚಾಕುಗಳು, ಚೂಪಾದ ಆಯುಧಗಳು, ಕಡ್ಡಿಗಳು, ಬ್ಲೇಡುಗಳು, ಕತ್ತರಿ, ಚೂಪಾದ ಸೀಸದಕಡ್ಡಿ ಮೊದಲಾದುವು ಆಡುವಾಗ ಇಲ್ಲವೆ ಕೋಪದಿಂದ ಬಿಸುಡುವಾಗ ಹತ್ತಿರವಿದ್ದವರ ಕಣ್ಣಿಗೆ ತಗಲಿ ಗಾಯವಾಗಬಹುದು. ಎಷ್ಟೋಸಾರಿ ಹೆಣ್ಣು ಮಕ್ಕಳು ಅವರು ಹಾಕಿಕೊಂಡಿರುವ ಗಾಜಿನ ಬಳೆಗಳನ್ನು ಚುಚ್ಚಿಕೊಂಡು ಕಣ್ಣುಗಳನ್ನು ಕಳೆದುಕೊಂಡಿರುವುದುಂಟು. ಚಿನ್ನಿಯ ಕೋಲು ಆಟವಲ್ಲಿ ಆಡುವನಿಗಿಂತಲೂ ದೂರದಲ್ಲಿರುವವರಿಗೆ ಇಲ್ಲವೇ ಆಟವನ್ನು ನೋಡುತ್ತಿರುವವರ ಕಣ್ಣಿಗೆ ಚೂಪಾದ ಚಿನ್ನಿಯು ತಗುಲಿ ಕಣ್ಣು ಹಾಳಾಗಿರುವುದುಂಟು. ಪಿಸ್ತೂಲು, ಬಿಲ್ಲು, ಕವಣೆ ಮುಂತಾದ ಆಟಗಳಿಂದಲೂ ಕಣ್ಣುಗಳು ಹಾಳಾಗಿರುವುದುಂಟು. ಆದರಿಂದ ಹಿರಿಯರು ಮಕ್ಕಳ ಆಟದ ಸಾಮಾನುಗಳನ್ನು ಆರಿಸುವಾಗ ಅಪಾಯಕಾರಿಯಾದ ಆಟದ ಸಾಮಾನುಗಳನ್ನು ಕೊಳ್ಳಬಾರದು. ದೀಪಾವಳಿ ಹಬ್ಬದಲ್ಲಿ ಸಂತೋಷಕ್ಕೆ ಸುಡುವ ಪಟಾಕಿ, ಹೂಬಾಣಗಳಿಂದ ಮಕ್ಕಳ ಕಣ್ಣುಗಳು ಹಾಳಾಗಿರುವುದುಂಟು. ಕೆಲವು ಮಕ್ಕಳು ಕೈಗೆ ಸಿಕ್ಕಿದ ವಸ್ತುಗಳಿಂದ ಹೊಡೆಯುವುದುಂಟು. ಮತ್ತು ಅವುಗಳನ್ನು ಸಿಕ್ಕಿದ ಕಡೆಗೆ ಎಸೆ

ಯುವುದುಂಟು. ಮಣ್ಣಲ್ಲಿ ಆಡುವಾಗ ಕೋಪದಿಂದ ಮಣ್ಣನ್ನು
ಇಲ್ಲವೆ ಮರಳಿನ ಉಂಡೆಗಳನ್ನು ಹತ್ತಿರವಿದ್ದ ಮಕ್ಕಳ ಕಣ್ಣಿಗೆ
ಎರಚುವುದುಂಟು. ಇಂತಹ ಚಾಳಿಗಳನ್ನು ತಪ್ಪಿಸದೆ ಎಷ್ಟೋ
ಬಾರಿ ಇದರ ಅಪಾಯವನ್ನು ಗಮನಿಸದೆ ಈ ಚಾಳಿಗಳ ಬೆಳ
ವಣಿಗೆಗೆ ಉತ್ತೇಜನ ಕೊಡುವುದುಂಟು. ಈ ಚಾಳಿಗಳನ್ನು ತಪ್ಪಿ
ಸಲು ತಂದೆತಾಯಿಗಳು ಯತ್ನಿಸಬೇಕು.

## 7. ದೃಷ್ಟಿದೋಷಗಳು

ಸ್ಪಷ್ಟದೃಷ್ಟಿ (Emmetropia)ಯುಳ್ಳ ಕಣ್ಣುಗಳಲ್ಲಿ ದೂರಕ್ಕೆ ಸರಿಹೊಂದಿಸತಕ್ಕ ಶಕ್ತಿ ವಿರಮಿಸಿರುವಾಗ ದೂರದ ವಸ್ತುವಿನಿಂದ ಹೊರಡುವ ಬೆಳಕಿನ ಕಿರಣಗಳು ದೃಷ್ಟಿಪಟಲದ ಮೇಲೆ ಕೇಂದ್ರೀಕೃತವಾಗಿ ಸ್ಪಷ್ಟತೆಯ ಬಿಂಬವನ್ನುಂಟುಮಾಡುವುವು.

ದೃಷ್ಟಿ ದೋಷಗಳುಳ್ಳ ಕಣ್ಣುಗಳಲ್ಲಿ ಬೆಳಕಿನ ಕಿರಣಗಳು ದೃಷ್ಟಿಪಟಲದ ಹಿಂಬದಿಯಲ್ಲಿ ಇಲ್ಲವೆ ಮುಂಬದಿಯಲ್ಲಿ ಕೇಂದ್ರೀಕೃತವಾಗಿ ಅಸ್ಪಷ್ಟ ದೃಷ್ಟಿಯನ್ನುಂಟುಮಾಡುವುವು. ಕಣ್ಣುಗಳ ಆಕಾರದಲ್ಲಿನ, ಕಣ್ಣುಗುಡ್ಡೆಯ ಉದ್ದದ ವ್ಯತ್ಯಾಸದಿಂದಲೂ, ಪಾರದರ್ಶಕಪಟಲದ, ಕಣ್ಣೊಳಗಿನ ಮಸೂರದ, ಜಲಬಿಂದು ಗಾಜು ಬಿಂದುವಿನ ಭಂಗಿಸೂಚಿಯ ವ್ಯತ್ಯಾಸದಿಂದಲೂ ದೃಷ್ಟಿ ದೋಷಗಳುಂಟಾಗುವುವು. ದೃಷ್ಟಿ ದೋಷಗಳಲ್ಲಿ ನಾಲ್ಕು ವಿಧವುಂಟು : [1] ದೂರದೃಷ್ಟಿ; [2] ಹತ್ತಿರದೃಷ್ಟಿ; [3] ಅಸಮ ದೃಷ್ಟಿ ಮತ್ತು [4] ಎರಡು ಕಣ್ಣುಗಳ ಏಕದೃಷ್ಟಿಯ ದೋಷಗಳು.

### [1] ದೂರದೃಷ್ಟಿ

ದೂರಕ್ಕೆ ಸರಿಹೊಂದಿಸತಕ್ಕ ಶಕ್ತಿಯು ವಿರಮಿಸಿರುವಾಗ ದೂರದ ವಸ್ತುವಿನಿಂದ ಹೊರಡುವ ಬೆಳಕಿನ ಕಿರಣಗಳು ದೃಷ್ಟಿಪಟಲದ ಹಿಂಬದಿಯಲ್ಲಿ ಕೇಂದ್ರೀಕೃತವಾಗುವುವು. ಕಣ್ಣುಗುಡ್ಡೆಯು ಸಣ್ಣದಾಗಿರುವುದಲ್ಲದೆ ಉದ್ದದಲ್ಲಿಯೂ ಕಡಿಮೆಯಿರುವುದು. ಶಿಶುವು ಹುಟ್ಟುವಾಗಲೇ ದೂರ ದೃಷ್ಟಿಯನ್ನು ಹೊತ್ತಿರುವುದು. ಮಗುವು ಬೆಳೆದಂತೆ ದೂರದೃಷ್ಟಿಯ ದೋಷವು ಕಡಿಮೆಯಾಗುತ್ತಾ ಸುಮಾರು ಹನ್ನೆರಡು ವರ್ಷದ ಹೊತ್ತಿಗೆ ಸರಿ

ಯಾದ ಸ್ಪಷ್ಟದೃಷ್ಟಿಯುಂಟಾಗುವುದು. ಆದಿವಾಸಿಗಳಲ್ಲೂ
ಮಾಂಸಭಕ್ಷಿ ಪ್ರಾಣಿಗಳಲ್ಲೂ ದೂರದೃಷ್ಟಿಯು ಸಾಧಾರಣವಾ
ಕಂಡುಬರುತ್ತದೆ. ವಯಸ್ಸಾದವರಲ್ಲಿ ಕಣ್ಣೊಳಗಿನ ಮಸೂರ
ಹೊರಪದರಗಳ ಭಂಗಿಸೂಚಿಯು ಹೆಚ್ಚಳದಿಂದ ದೂರದೃಷ್
ಮೂಡುವುದು.

ಈ ಸ್ಥಿತಿಯಲ್ಲಿ ಕಣ್ಣು ದೂರದಲ್ಲಿರುವ ವಸ್ತುಗಳನ್ನು ಸ್ಪಷ್
ವಾಗಿ ನೋಡಲೂ ಕೂಡ ಹೆಚ್ಚು ದೂರಕ್ಕೆ ತಕ್ಕಂತೆ ಹೊಂದಿ
ಕೊಳ್ಳುವ ಶಕ್ತಿಯನ್ನು ವೆಚ್ಚ ಮಾಡಬೇಕು. ಸ್ಪಷ್ಟದೃಷ್ಟಿಯುಳ
ಕಣ್ಣು ದೂರದ ವಸ್ತುಗಳನ್ನು ತ್ರಾಸವಿಲ್ಲದಂತೆ ಸ್ಪಷ್ಟವಾ
ನೋಡಬಲ್ಲದು. ಆದರೆ ದೂರದೃಷ್ಟಿಯುಳ್ಳ ಕಣ್ಣು ಅದೆ
ದೂರದ ವಸ್ತುಗಳನ್ನು ಸ್ಪಷ್ಟವಾಗಿ ನೋಡಬೇಕಾಗಿದ್ದರೆ ಹೆಚ್ಚು
ತ್ರಾಸಪಡಬೇಕು. ಹೆಚ್ಚು ದೂರದೃಷ್ಟಿಯ ದೋಷವಿದ್ದರೆ ಅ
ಕಣ್ಣು ಹೆಚ್ಚು ತ್ರಾಸವನ್ನು ಅನುಭವಿಸಬೇಕು. ಜೊತೆಗೆ ಹತ್ತಿರ
ದಲ್ಲಿರುವ ವಸ್ತುಗಳನ್ನು ಸಷ್ಟವಾಗಿ ನೋಡಬೇಕಾದರೆ ಮತ್ತಷ್ಟು
ದೂರಕ್ಕೆ ತಕ್ಕಂತೆ ಹೊಂದಿಕೊಳ್ಳುವ ಶಕ್ತಿಯನ್ನು ವೆಚ್ಚಮಾಡ
ಬೇಕು. ಅದರಿಂದ ಈ ದೋಷವುಳ್ಳ ಕಣ್ಣು ದೂರಕ್ಕೂ ಮತ್ತು
ಹತ್ತಿರಕ್ಕೂ ಯಾವಾಗಲೂ ದೂರಕ್ಕೆ ತಕ್ಕಂತೆ ಹೊಂದಿಸಿಕೊಳ್ಳುವ
ಶಕ್ತಿಯನ್ನು ವೆಚ್ಚ ಮಾಡುತ್ತಲೇ ಇರಬೇಕು. ಹೀಗೆ ಹೆಚ್ಚು ವೆಚ್ಚ
ಮಾಡುವ ಶಕ್ತಿಯು ದೂರದೃಷ್ಟಿಯ ದೋಷದ ಪ್ರಮಾಣಕ್ಕೆ
ಸಮವಾಗಿರುತ್ತದೆ. ಅದರಿಂದ ಕಣ್ಣುಗಳು ಹೆಚ್ಚು ತ್ರಾಸವನ್ನು
ಹೊಂದಿ ಬಹು ಬೇಗನೆ ಬಳಲುವುವು. ಅಲ್ಲದೆ ತಲೆನೋವು.
ಅಸ್ಪಷ್ಟದೃಷ್ಟಿ ಮುಂತಾದ ಚಿಸ್ನೆಗಳು ತಲೆದೋರುವುವು. ಎರಡು
ಕಣ್ಣುಗಳಲ್ಲಿ ಸಹಕಾರವು ತಪ್ಪಿ ಬಹುಬೇಗನೆ ನೋವು ಕಾಣಿಸಿ
ಕೊಳ್ಳುವುದು. ಹೊಲಿಗೆ, ಕಸೂತಿ, ಓದುವ ಕೆಲಸಗಳು ಬಳಲಿಕೆ

ಯನ್ನು ಹೆಚ್ಚಿಸುವುವು. ಕಣ್ಣುಗಳಲ್ಲಿ ಉರಿ, ಕಣ್ಣೀರು, ಕಣ್ಣು ಉಜ್ಜುವುದು, ಪದೇ ಪದೇ ಕಣ್ಣುಮಿಟುಕಿಸುವುದು ಮುಂತಾದ ಚಿಹ್ನೆಗಳು ಕಾಣುವುವು. ಬಲವಂತದಿಂದ ಹತ್ತಿರದ ಕೆಲಸ ಮಾಡಿ ದಲ್ಲಿ ತಲೆನೋವು ಕಾಣಿಸಿಕೊಳ್ಳುವುದು.

ಹುಡುಗರಲ್ಲಿ ದೂರಕ್ಕೆ ತಕ್ಕಂತೆ ಹೊಂದಿಸಿಕೊಂಡು ಹೋಗುವ ಶಕ್ತಿಯು ಅಧಿಕವಾಗಿರುವುದರಿಂದ ದೂರದೃಷ್ಟಿ ದೋಷವು ಬಹಳ ಅಲ್ಪವಾಗಿದ್ದರೆ ಅದನ್ನು ಬಹುಮಟ್ಟಿಗೆ ಸರಿಪಡಿಸಿಕೊಳ್ಳಬಹುದು. ದೂರದೃಷ್ಟಿದೋಷವು ಹೆಚ್ಚಿದ್ದರೆ. ಹೊಂದಿಸಿಕೊಂಡು ಹೋಗುವ ಶಕ್ತಿಯ ಮೇಲೆ ಹೆಚ್ಚು ತ್ರಾಸಬಿದ್ದರೆ ದೂರದೃಷ್ಟಿ ದೋಷಗಳ ಚಿಹ್ನೆಗಳು ತಲೆದೋರುವುವು. ದೂರದೃಷ್ಟಿ ದೋಷದ ಅಳತೆ ಯನ್ನು ದೂರಕ್ಕೆ ಹೊಂದಿಕೊಂಡು ಹೋಗುವ ಶಕ್ತಿಯನ್ನು ಸಡಿಲ ಮಾಡುವಂತಹ ಔಷಧಿಗಳನ್ನು ಹಾಕಿದ ಮೇಲೆ ತಿಳಿಯ ಬೇಕು. ದೂರದೃಷ್ಟಿಯ ದೋಷವು ಹೆಚ್ಚಿರುವಾಗ ಹತ್ತಿರದ ಕೆಲಸವನ್ನು ಆದಷ್ಟುಮಟ್ಟಿಗೆ ಮಾಡಲಾಗುವುದಿಲ್ಲ. ಶಾಲೆಯಲ್ಲಿ ಮಗುವು ಓದುವುದನ್ನು ಬಿಟ್ಟು ಕಿಟಿಕಿಯಿಂದ ಹೊರಗೆ ನೋಡಲು ಇಚ್ಛಿಸುವುದು. ಬಯಲಲ್ಲಿ ಆಡುವ ಆಟಗಳಲ್ಲಿ ಹೆಚ್ಚು ಆಸಕ್ತಿ ತೋರಿಸುವುದು, ದೂರದ ದೃಷ್ಟಿಯನ್ನು ಸರಿಪಡಿಸುವ ಕನ್ನಡಕ ಗಳನ್ನು ದೋಷಕ್ಕೆ ಅನುಗುಣವಾಗಿ ಬಳಸುವುದರಿಂದ ಸರಿಯಾದ ದೃಷ್ಟಿಯನ್ನು ಹೊಂದಲು ಸಾಧ್ಯ. ಕನ್ನಡಕಗಳು ಸ್ವಲ್ಪಮಟ್ಟಿಗೆ ದೂರಕ್ಕೆ ಹೊಂದಿಕೊಂಡು ಹೋಗುವ ಶಕ್ತಿಯ ದೂರದೃಷ್ಟಿ ಯನ್ನು ಸರಿಪಡಿಸಿದ ನಂತರ ತ್ರಾಸವನ್ನು ತಪ್ಪಿಸುವು ವಲ್ಲದೆ ಕಿರಣಗಳನ್ನು ದೃಷ್ಟಿಪಟಲದ ಮೇಲೆ ಕೇಂದ್ರೀಕರಿ ಸಲು ಸಹಾಯ ಮಾಡುವುವು. ವ್ಯಕ್ತಿಯ ದೋಷದ ಮೇಲೆ ಹತ್ತಿರದ ಕೆಲಸವನ್ನು ಮಾಡುವಾಗಲೆಲ್ಲಾ ಸದಾ ಕನ್ನಡಕ ಗಳನ್ನು ಹಾಕಿಕೊಳ್ಳುವ ಸ್ಥಿತಿಯನ್ನು ನಿರ್ಧರಿಸಬೇಕಾಗುತ್ತದೆ.

(2) ಹತ್ತಿರದೃಷ್ಟಿ

ದೂರಕ್ಕೆ ಸರಿ ಹೊಂದಿಸತಕ್ಕ ಶಕ್ತಿಯು ವಿರಮಿಸಿರುವಾಗ ದೂರದ ವಸ್ತುವಿನಿಂದ ಹೊರಡುವ ಬೆಳಕಿನ ಕಿರಣಗಳು ದೃಷ್ಟಿ ಪಟಲದ ಮುಂಬದಿಯಲ್ಲಿ ಕೇಂದ್ರಿಕೃತವಾಗುವುವು. ಕಣ್ಣು ಗುಡ್ಡೆಯ ಆಕಾರದ ವ್ಯತ್ಯಾಸದಿಂದ ಸಾಮಾನ್ಯವಾಗಿ ಈ ಸ್ಥಿತಿಯು ಉಂಟಾಗುವುದು.

ಹುಟ್ಟುವಾಗ ಕಣ್ಣುಗುಡ್ಡೆಯ ಉದ್ದ ಸುಮಾರು 16.5 ಮಿಲಿ ಮೀಟರ್‌ಗಳು. ಕಣ್ಣುಗುಡ್ಡೆಯ ಉದ್ದವು ಮೊದಲು ಏಳು ವರ್ಷಗಳು ಬಹು ವೇಗದಿಂದ ಹೆಚ್ಚುತ್ತಾ ಹೋಗುತ್ತಿದ್ದು ನಂತರ ಬೆಳವಣಿಗೆಯಲ್ಲಿ ನಿಧಾನವಾಗಿ 18 ವರ್ಷದ ಹೊತ್ತಿಗೆ ಸರಿಯಾದ ಕಣ್ಣುಗುಡ್ಡೆಯ ಉದ್ದವನ್ನು 24.5 ಮಿ.ಮೀ. ಮುಟ್ಟುವುದು. ಈ ಬೆಳೆಯುವ ಹಂತದಲ್ಲಿ ಜನಸಂಖ್ಯೆಯಲ್ಲಿ ಸ್ಪಷ್ಟದೃಷ್ಟಿಯ ಕಣ್ಣುಗಳೇ ಹೆಚ್ಚು.

ಒಮ್ಮೊಮ್ಮೆ ಶಿಶುವು ಜನಿಸುವಾಗಲೇ ಹತ್ತಿರದೃಷ್ಟಿಯ ದೋಷವನ್ನು ಹೊತ್ತೇ ಜನಿಸುವುದುಂಟು. ದಿನ ತುಂಬದೆ ಹುಟ್ಟುವ ಮಕ್ಕಳಲ್ಲಿ ಹತ್ತಿರದೃಷ್ಟಿಯ ದೋಷ ಹುಟ್ಟುವಾಗಲೇ ಇರುವುದುಂಟು. ಗರ್ಭಿಣಿಯ ರೋಗಗಳು ಶಿಶುಗಳಲ್ಲಿ ಹುಟ್ಟು ಹತ್ತಿರದೃಷ್ಟಿ ದೋಷವನ್ನುಂಟು ಮಾಡಬಲ್ಲವೆಂದು ನಂಬಲಾಗಿದೆ ಇಂತಹ ಶಿಶುವಿನಲ್ಲಿ ಕಣ್ಣುಗುಡ್ಡೆಯ ಹಿಂಭಾಗವು ತೆಳ್ಳನಾಗಿ ಉಬ್ಬಿರುವುದು.

ದುರಂತ ಗತಿಯುಳ್ಳ ಹತ್ತಿರದೃಷ್ಟಿಯು 5 ರಿಂದ 10 ವರ್ಷದೊಳಗಿನ ಮಕ್ಕಳಲ್ಲಿ ಕಾಣಿಸಿಕೊಳ್ಳುವುದು. ವಯಸ್ಸು ಹೆಚ್ಚಿ ದಂತೆ 25 ವರ್ಷದವರೆಗೂ ಇಲ್ಲವೆ ಅನಂತರವೂ ಈ ದೋಷವು

ದೂರದೃಷ್ಟಿಯ
ದೋಷವನ್ನು
ಮಸೂರದಿಂದ
ಸರಿಪಡಿಸುವಿಕೆ



ದೂರದೃಷ್ಟಿಯ
ಕಣ್ಣು ವಿರಮಿಸಿರುವಾಗ



ದೂರದೃಷ್ಟಿಯ ಕಣ್ಣು
ದೂರಕ್ಕೆ ತಕ್ಕಂತೆ
ಹೊಂದಿಸುವ ಶಕ್ತಿಯನ್ನು
ಬಳಸುತ್ತಿರುವಾಗ



ಹತ್ತಿರ ದೃಷ್ಟಿಯನ್ನು
ಮಸೂರದಿಂದ
ಸರಿಪಡಿಸುವಿಕೆ



ಹೆಚ್ಚುತ್ತಲೇ ಹೋಗುವುದು. ಈ ದೋಷವಿದ್ದವರ ಭಾವೀ ಜೀವನವು ಚಿಂತಾಜನಕವಾಗುವುದು. ಈ ಸ್ಥಿತಿಯನ್ನು ತಡೆಗಟ್ಟುವ ಉಪಾಯವು ಇನ್ನೂ ತಿಳಿದಿಲ್ಲ. ಈ ಸ್ಥಿತಿಗೆ ಕಣ್ಣೊಳಗಿನ ಒಂದು ಬಗೆಯ ಕೀಳುದರ್ಜೆಯ ಕೆರಳುವಿಕೆ ಕಾರಣವೆಂದು ಹಲವರ ಅಭಿಪ್ರಾಯ; ಇತರರು ಆಹಾರದಲ್ಲಿನ ಜೀವಸತ್ವ 'ಡಿ' ಯ ಅಭಾವವೆನ್ನುತ್ತಾರೆ. ಕೆಲವರು ಈ ಸ್ಥಿತಿಗೆ ನಿರ್ನಾಳ ಗ್ರಂಥಿಗಳ ಆಂತರಿಕ ಬದಲಾವಣೆಗಳು ಕಾರಣವೆನ್ನುತ್ತಾರೆ. ಇತರರು ಕಣ್ಣುಗುಡ್ಡೆಯ ರಚನೆಯಲ್ಲೇ ಹುಟ್ಟು ದೋಷವಿರುವುದೆನ್ನುತ್ತಾರೆ. ಕೆಲವರು ಆಹಾರವಲ್ಲಿನ ಸಸಾರಜನಕದ ಅಭಾವ ಈ ಸ್ಥಿತಿಗೆ ಕಾರಣವೆನ್ನುವರು. ಹೀಗೆ ಹಲವಾರು ಮತಗಳಿರುವುದರಿಂದ ಕಾರಣವು ತಿಳಿಯದಾಗಿದೆ. ಈ ಸ್ಥಿತಿಯು ಹೆಚ್ಚಿಗೆ ಹೆಣ್ಣುಮಕ್ಕಳಲ್ಲಿ ಕಾಣಿಸಿಕೊಳ್ಳುವುದು.

ಈ ಸ್ಥಿತಿಯಲ್ಲಿ ಕಣ್ಣಿನ ಗುಡ್ಡು ಉಬ್ಬಿ ಎಳೆದಂತಾಗಿ ಒಳಗಡೆಯ ಪರೆಗಳಲ್ಲಿ ಬಿರುಕುಂಟಾಗುವುದು. ಅಂತಿಮಾವಸ್ಥೆಯಲ್ಲಿ ಕಣ್ಣೊಳಗಿರುವ ಗಾಜು ಬಿಂದುವಿನ ರಚನೆಯು ಮಾರ್ಪಾಟಾಗಿ ನೀರಿನಂತಾಗುವುದು. ಅಲ್ಲದೆ ದೃಷ್ಟಿಪಟಲದಲ್ಲಿ ವ್ಯತ್ಯಾಸಗಳುಂಟಾಗಿ, ದೃಷ್ಟಿಪಟಲದ ಸ್ಥಾನ ಪಲ್ಲಟವು ಕಾಣಿಸಿಕೊಳ್ಳುವುದು. ಜೊತೆಗೆ ಕಣ್ಣೊಳಗಿರುವ ಮಸೂರಕ್ಕೆ ಆಶ್ರಯತಪ್ಪಿ ಅದರ ಸ್ಥಾನವೂ ಕೂಡ ಪಲ್ಲಟವಾಗುವುದು. ಈ ಸ್ಥಿತಿಯಲ್ಲಿ ದೃಷ್ಟಿಯು ಬಹುಮಟ್ಟಿಗೆ ಕ್ಷೀಣಿಸಿ ಕೊನೆಗೆ ಕುರುಡಿನಲ್ಲಿ ಕೊನೆಗೊಳ್ಳುವುದು. ಈ ಸ್ಥಿತಿಯಲ್ಲಿ ಶೈಶವಾವಸ್ಥೆಯಲ್ಲಿ ದೋಷವನ್ನು ಸರಿಪಡಿಸುವ ಕನ್ನಡಕಗಳನ್ನು ಕೊಟ್ಟರೂ ದೃಷ್ಟಿಯು ಕ್ರಮೇಣ ಕ್ಷೀಣಿಸುತ್ತಲೇ ಹೋಗುವುದು. ಈ ದೋಷವುಳ್ಳವರಿಗೆ ಯಾರೂ ಯಾವ ವಿಧವಾದ ನಂಬುಗೆಯನ್ನೂ ಕೊಡಲಾಗುವುದಿಲ್ಲ.

ಒಟ್ಟಿನಲ್ಲಿ ಕಣ್ಣುಗುಡ್ಡೆಯ ಆಕಾರ ಮತ್ತು ಪಾರದರ್ಶಕತ್ವದ ದೋಷಗಳನ್ನು ಸರಿಪಡಿಸುವ ಕನ್ನಡಕಗಳನ್ನು ಉಪಯೋಗಿಸುವುದರಿಂದ ಈ ದೋಷಗಳನ್ನು ನಿವಾರಿಸಿಕೊಳ್ಳಬಹುದು. ಸರಿಯಾಗಿ ನೆಟ್ಟಗೆ ಕೂತು ಓದುವುದನ್ನು ಅಭ್ಯಾಸಿಸುವುದರಿಂದ ಈ ದೋಷಗಳನ್ನು ತಕ್ಕಮಟ್ಟಿಗೆ ಕಡಿಮೆಮಾಡಿಕೊಳ್ಳಬಹುದೇ ಹೊರತು ಪೂರ್ಣವಾಗಿ ನಿವಾರಿಸಿಕೊಳ್ಳಲಾಗುವುದಿಲ್ಲ. ಕನ್ನಡಕಗಳನ್ನು ಉಪಯೋಗಿಸದೆಯೇ ಬರಿಯ ಕಣ್ಣಿಗೆ ಹಲವು ಬಗೆಯ ವ್ಯಾಯಾಮಗಳನ್ನು ಅಭ್ಯಸಿಸುವುದರಿಂದ ದೃಷ್ಟಿದೋಷಗಳನ್ನು ನಿವಾರಿಸಿಕೊಳ್ಳಬಹುದೆಂಬ ನಂಬುಗೆಯು ಹಲವರಲ್ಲಿ ಬೇರೂರಿರುತ್ತದೆ. ಕಣ್ಣಿನ ಆಕಾರದಲ್ಲಿ ದೋಷವಿರುವುದರಿಂದ ಈ ಬಗೆಯ ವ್ಯಾಯಾಮಗಳು ಮೊದಲೇ ತ್ರಾಸ ಹೊಂದಿರುವ ಕಣ್ಣಿನ ಮಾಂಸಖಂಡಗಳನ್ನು ಮತ್ತಷ್ಟು ತ್ರಾಸಗೊಳಿಸುವುದರಿಂದ ಹೆಚ್ಚು ನಷ್ಟ ಸಂಭವಿಸುವುದೇ ಹೊರತು ಒಳ್ಳೆಯದೆಂದಿಗೂ ಆಗುವುದಿಲ್ಲ. ಈ ವಿಚಾರದಲ್ಲಿ ಜನರು ತಿಳುವಳಿಕೆಯನ್ನು ಪಡೆಯುವುದು ಅಗತ್ಯ.

## ದೃಷ್ಟಿದೋಷಗಳ ನಿರೋಧಕ ಕ್ರಮಗಳು

(1) ಹೆಚ್ಚು ಹತ್ತಿರದೃಷ್ಟಿ ದೋಷವುಳ್ಳ ಸ್ತ್ರೀ ಪುರುಷರು ವಿವಾಹವಾಗಬಾರದು. ದಂಪತಿಗಳಲ್ಲಿ ಯಾರಾದರೂ ಒಬ್ಬರಿಗೆ ಹೆಚ್ಚು ಹತ್ತಿರದೃಷ್ಟಿ ದೋಷವಿದ್ದರೆ ಹುಟ್ಟುವ ಮಕ್ಕಳಲ್ಲಿ ಕೆಲವರು ಹತ್ತಿರದೃಷ್ಟಿಯ ದೋಷಕ್ಕೆ ಒಳಗಾಗುವ ಸಂಭವವುಂಟು. ದಂಪತಿಗಳಿಬ್ಬರೂ ಹೆಚ್ಚು ಹತ್ತಿರದೃಷ್ಟಿಯ ದೋಷವನ್ನು ಹೊತ್ತಿದ್ದರೆ ಅವರ ಮಕ್ಕಳೆಲ್ಲರನ್ನೂ ದೃಷ್ಟಿ ಪರೀಕ್ಷೆಗೆ ಗುರಿಪಡಿಸಿ ಹತ್ತಿರದೃಷ್ಟಿಯ ದೋಷವಿರುವುದೇ ಇಲ್ಲವೇ ಎಂಬುದನ್ನು ತಿಳಿಯಬೇಕು.

(2) ಬೆಳೆಯುತ್ತಿರುವ ಮಕ್ಕಳು ಎಂಟು ವಯಸ್ಸು ಮುಟ್ಟುವವರೆಗೂ ಹತ್ತಿರದ ಕೆಲಸವನ್ನು ಬಹಳ ಹೊತ್ತು ಮಾಡಬಾರದು. ಹೊರಬಯಲಿನಲ್ಲಿ ಆಟಗಳಿಗೆ ಆಡುವಪ್ರೋತ್ಸಾಹಿಸಬೇಕು.

(3) ಮಕ್ಕಳು ಓದುವ ಪುಸ್ತಕಗಳು ದಪ್ಪ ಅಕ್ಷರಗಳ ಮುದ್ರಣವನ್ನು ಹೊಂದಿರಬೇಕು. ಹೊಳಪು ಕಾಗದವನ್ನು ಮುದ್ರಣಕ್ಕೆ ಬಳಸಬಾರದು.

(4) ನೆಟ್ಟಗೆ ಕೂತು ಓದುವ ಅಭ್ಯಾಸವನ್ನು ಮಗುವಿಗೆ ಮಾಡಿಸಬೇಕು. ಚಲಿಸುತ್ತಿರುವ ವಾಹನಗಳಲ್ಲಿ ಓದುವುದಕ್ಕೆ ಪ್ರೋತ್ಸಾಹ ನೀಡಬಾರದು.

(5) ಪುಸ್ತಕವನ್ನು ಕಣ್ಣಿಂದ ಮೂವತ್ತು ಸೆಂಟಿಮೀಟರಿನಷ್ಟು ದೂರದಲ್ಲಿರಿಸಿ ಓದುವುದನ್ನು ಕಲಿಸಬೇಕು.

(6) ಓದಲು ಮತ್ತು ಬರೆಯಲು ಹಗಲು ಬೆಳಕೇ ಉತ್ತಮ; ಬೆಳಕು ಎಡಭುಜದ ಮೇಲಿಂದ ಬರೆಯುವ ಕಾಗದದ ಮೇಲೆ ನೆರಳು ಬೀಳದಂತೆ ಪ್ರಸರಿಸಬೇಕು.

(7) ಒಂದೇ ಸಮನೆ ಮಗುವನ್ನು ಓದಲು ಬಿಡಬಾರದು. ಒಂದು ಗಂಟೆ ಓದಿದನಂತರ ಹತ್ತು ನಿಮಿಷಗಳ ಕಾಲ ವಿಶ್ರಾಂತಿ ಅಗತ್ಯ.

(8) ಕಾಯಿಲೆಯಲ್ಲೂ, ಕಾಯಿಲೆಯಿಂದ ಎಚ್ಚೆತ್ತುಕೊಳ್ಳುವ ಸಮಯದಲ್ಲೂ ಮಗುವು ಓದಬಾರದು.

(9) ಮಗುವಿನ ಆರೋಗ್ಯಕ್ಕೆ ಮುಖ್ಯ ಗಮನ ಕೊಡಬೇಕು. ನಿಶ್ಯಕ್ತಿಯುಳ್ಳ ಮಗುವು ಓದುವ ತ್ರಾಸನ್ನು ಸಹಿಸಲಾರದು.

(10) ಶಾಲೆಗೆ ಸೇರಿಸುವ ಮುನ್ನ ಮಗುವಿನ ದೃಷ್ಟಿ ಪರೀಕ್ಷಿಸುವುದಲ್ಲದೆ ಆಗಿಂದಾಗ್ಗೆ ನೇತ್ರ ವೈದ್ಯರನ್ನು ಕಂಡು ಸಲಹೆ ಪಡೆಯಬೇಕು. ದೃಷ್ಟಿ ದೋಷಗಳೇನಾದರೂ ಕಂಡಲ್ಲಿ, ಅವುಗಳ ನಿವಾರಣೆಗೆ ಕನ್ನಡಕಗಳನ್ನು ಬಳಸುವುದಲ್ಲದೆ ಮಗುವು ಅವುಗಳನ್ನು ಹಾಕಿಕೊಳ್ಳುವಂತೆ ನೋಡಿಕೊಳ್ಳಬೇಕು.

### ದೃಷ್ಟಿ ದೋಷಗಳ ಅಸಮಾನತೆ

ಎರಡು ಕಣ್ಣುಗಳು ಬೇರೆ ಬೇರೆ ದೃಷ್ಟಿ ದೋಷಗಳನ್ನು ಹೊತ್ತಿರಬಹುದು. ಒಂದು ಸರಿಯಾದ ಸ್ಪಷ್ಟದೃಷ್ಟಿಯನ್ನೂ, ಇನ್ನೊಂದು ಹತ್ತಿರದೃಷ್ಟಿಯನ್ನೂ, ಇಲ್ಲವೇ ಒಂದು ಹತ್ತಿರ ದೃಷ್ಟಿಯನ್ನು ಇನ್ನೊಂದು ದೂರದೃಷ್ಟಿಯನ್ನು ಹೊತ್ತಿರಬಹುದು. ಈ ಕಣ್ಣುಗಳಲ್ಲಿ ಎರಡು ಕಣ್ಣುಗಳಿಂದಲೂ ನೋಡಿ, ಬಿಂಬಗಳನ್ನು ಒಂದಾಗಿ ಕೂಡಿಸಿ ನೋಡುವ ಚೈತನ್ಯವಿರುವುದಿಲ್ಲ. ಎರಡು ಬಿಂಬಗಳನ್ನು ಕೂಡಿಸಿ ಒಂದಾಗಿ ನೋಡುವ ಪ್ರಯತ್ನವು ಕಣ್ಣುಗಳಲ್ಲಿ ಸೋಲನ್ನುಂಟುಮಾಡುವುವು. ಹೆಚ್ಚು ಅಸಮಾನತೆಯಿದ್ದಲ್ಲಿ ಒಂದಾಗಿ ಕೂಡಿಸಿ ನೋಡುವ ಯತ್ನವು ಸಾಗದೆ ದೃಷ್ಟಿಯು ಒಂದೇ ಕಣ್ಣಿನ ನೋಟವಾಗಿ ಪರಿಣಮಿಸುವುದು. ಸೋಮಾರಿಯಾದ ಕಣ್ಣು ವಾರೆಯಾಗಿ ಹೋಗಿ ವಕ್ರತೆಯನ್ನುಂಟುಮಾಡುವುದು. ರೋಗಿಗೂ ಮತ್ತು ಅವರ ಸಂಬಂಧಿಕರಿಗೂ ನಿಜಸ್ಥಿತಿಯನ್ನು ತಿಳಿಸುವುದು ಒಳ್ಳಿತು. ತಂದೆತಾಯಿಗಳು ಮಗುವಿನ ಉಳಿದ ಅಲ್ಪ ದೃಷ್ಟಿಯನ್ನು ರಕ್ಷಿಸುವ ವಿಷಯದಲ್ಲಿ ಸರಿಯಾದ ತಿಳುವಳಿಕೆಯನ್ನು ಕೊಡುವುದು ಅಗತ್ಯ. ದೃಷ್ಟಿ

ದೋಷ ಹೆಚ್ಚಿರುವ ಕಣ್ಣುಗಳಲ್ಲಿ ಗುಡ್ಡೆಗಳು ದೊಡ್ಡವಾಗಿ ನೋಡಲು ಗೂಡಿಂದ ಹೊರಬಂದತೆ ಕಾಣುವುದು. ಕಣ್ಣು ಒಂದುಕಡೆ ಓರೆಯಾಗಿ ವಕ್ರಗಣ್ಣಾಗಬಹುದು. ದೃಷ್ಟಿಯು ಬಹು ಕಡಿಮೆಯಾಗಿರಬಹುದು.

ಹತ್ತಿರದ ದೃಷ್ಟಿಯ ಅಲ್ಪ ದೋಷಗಳು ಸ್ವಲ್ಪಮಟ್ಟಿಗೆ ಸಾಧಾರಣವಾದುವುಗಳು. ಈ ದೋಷಗಳು ವಯಸ್ಸು ಬೆಳೆದಂತೆ ಹೆಚ್ಚಾಗುವುದಿಲ್ಲ. ಒಂದು ಬಗೆಯ ಸ್ತಿಮಿತ ಸ್ಥಿತಿಗೆ ಬರುವುವು. ಅಲ್ಲದೆ ಕಣ್ಣೊಳಗೆ ಆಂತರಿಕ ಬದಲಾವಣೆಗಳಾಗುವುದಿಲ್ಲ. ದೂರದಲ್ಲಿರುವ ವಸ್ತುಗಳು ಸ್ವಲ್ಪಮಟ್ಟಿಗೆ ಅಸ್ಪಷ್ಟವಾಗಿ ಕಾಣಿಸುವುವು. ಹತ್ತಿರದ ಕೆಲಸ ಮಾಡಿದಮೇಲೆ ಏನೋ ಒಂದು ಬಗೆಯ ಜುಗುಪ್ಸೆ, ಕಣ್ಣುಗಳಲ್ಲಿ ಭಾರ, ಬೆಳಕು ನೋಡಲು ಭಯ, ಕಣ್ಣ ಮುಂದೆ ಕಪ್ಪು ಚುಕ್ಕಿಗಳು ತೇಲುತ್ತಿರುವಂತೆ ಭಾಸವಾಗುವುದು. ಸ್ಪಷ್ಟವಾಗಿ ನೋಡಲು ಕಣ್ಣುಗಳನ್ನು ಹಿಚುಕಿ ಕಿರಿದುಮಾಡಿ ನೋಡಬೇಕಾಗುವುದು.

ಈ ಎರಡು ಗುಂಪುಗಳ ಅಂತರದಲ್ಲಿ ಹತ್ತಿರದೃಷ್ಟಿಯ ಸಾಧಾರಣ ದೋಷಗಳು ಕಂಡುಬರುವುವು. ಈ ದೋಷಗಳು ಒಂದು ಸ್ತಿಮಿತ ಸ್ಥಿತಿಯನ್ನು ಮುಟ್ಟುವವರೆಗೆ ಬೆಳೆಯುತ್ತಲೇ ಹೋಗುವುವು. ಆ ಸ್ಥಿತಿಯನ್ನು ಮುಟ್ಟಿದನಂತರ ದೋಷವು ಸ್ತಬ್ಧತೆಯನ್ನು ತಾಳುವುದು. 8 ರಿಂದ 16 ವಯಸ್ಸಿನೊಳಗೆ ಈ ದೋಷಗಳು ಬಹು ವೇಗದಿಂದ ಮುಂದುವರಿಯುವುವು. ಈ ಬೆಳೆಯುವ ಹಂತದಲ್ಲಿ ಕಣ್ಣುಗಳ ಸರಿಯಾದ ರಕ್ಷಣೆಯು ಮುಂದೆ ಉಂಟಾಗುವ ಅಪಾಯಗಳನ್ನು ಬಹುಮಟ್ಟಿಗೆ ತಡೆಗಟ್ಟಬಲ್ಲದು.

ಮುಪ್ಪಿನಲ್ಲಿ ಕಾಣಿಸಿಕೊಳ್ಳುವ ಕಣ್ಪರೆಯಲ್ಲಿ ಕಣ್ಣೊಳಗಿನ ಮಸೂರದ ಭಂಗಿಸೂಚಕದ ಹೆಚ್ಚಳದಿಂದ ಹತ್ತಿರದೃಷ್ಟಿಯುಂಟಾ

ಗುವುದು. ಬಹು ಮೂತ್ರರೋಗದಲ್ಲೂ ಹತ್ತಿರದೃಷ್ಟಿ ಮೂಡು ವುದು.

ಹತ್ತಿರದೃಷ್ಟಿ ದೋಷವುಳ್ಳವರು ಹತ್ತಿರವಿರುವ ವಸ್ತುಗಳನ್ನು ನೋಡಲು ದೂರಕ್ಕೆ ತಕ್ಕಂತೆ ಹೊಂದಿಸಿಕೊಂಡು ಹೋಗುವ ಶಕ್ತಿಯ ಸಹಾಯವಿಲ್ಲದೆಯೇ ನೋಡಬಲ್ಲರು. ಆದರಿಂದ ಪ್ರಕೃತಿಯು ಹತ್ತಿರದ ಕೆಲಸಕ್ಕೆ ವಿಧಿಸಿರುವಷ್ಟು ದೂರಕ್ಕೆ ತಕ್ಕಂತೆ ಹೊಂದಿಕೊಂಡು ಹೋಗುವ ಶಕ್ತಿಯ ಸಹಾಯವು ಈ ಕಣ್ಣುಗಳಿಗೆ ದೊರಕಿದಂತಾಗುವುದು. ಅದರಿಂದಲೇ ಈ ದೋಷವನ್ನು ಸರಿಪಡಿಸುವ ಕನ್ನಡಕಗಳನ್ನು ಸ್ಪಷ್ಟವಾಗಿ ನೋಡಲು ಸದಾ ಹಾಕಿಕೊಂಡೇ ಇರಬೇಕು. ಹತ್ತಿರದ ಕೆಲಸವನ್ನು ಆದಷ್ಟು ಮಿತಿಗೊಳಿಸುವುದಲ್ಲದೆ ಸರಿಯಾದ ಬೆಳಕಿನಲ್ಲಿ ಮಾಡಬೇಕು. ಓದುವ ಅಕ್ಷರಗಳು ಸ್ಪಷ್ಟವಾಗಿ ಸರಿಯಾದ ಗಾತ್ರವನ್ನು ಹೊಂದಿರಬೇಕು. ಆದಷ್ಟು ಕಣ್ಣಿಗೆ ಹತ್ತಿರ ಇಟ್ಟುಕೊಂಡು ಓದಬಾರದು. ಈ ದೋಷವುಳ್ಳ ಮಗುವು ದೃಢಕಾಯವಾಗಿರದೆ ಶಿಥಿಲವಾಗಿರುವುದರಿಂದ ಅದರ ಆರೋಗ್ಯಕ್ಕೆ ಗಮನ ಕೊಡಬೇಕು. ಅಲ್ಲದೆ ಆಗಿಂದಾಗ್ಗೆ ದೋಷದ ಬೆಳವಣಿಗೆಯನ್ನು ತಿಳಿಯಲು ಕಣ್ಣುಗಳನ್ನು ನೇತ್ರ ವೈದ್ಯರಿಂದ ಪರೀಕ್ಷಿಸಿಕೊಳ್ಳುತ್ತಿರಬೇಕು. ದೋಷವನ್ನು ಸರಿಪಡಿಸತಕ್ಕಂಥ ಕನ್ನಡಕಗಳನ್ನು ದೋಷಕ್ಕನುಗುಣವಾಗಿ ಹಾಕಿಕೊಳ್ಳುವುದರಿಂದ ಸರಿಯಾದ ದೃಷ್ಟಿಯನ್ನು ಹೊಂದಲು ಸಾಧ್ಯ.

(3) ಅಸಮ ದೃಷ್ಟಿ

ಕರಿಯ ಗುಡ್ಡೆಯ ಆಕಾರ ವ್ಯತ್ಯಾಸ ಇಲ್ಲವೆ ಕಣ್ಣೊಳಗಿನ ಮಸೂರದ ಆಕಾರದ ವ್ಯತ್ಯಾಸದಿಂದ ಕಿರಣಗಳು ಒಂದೇ ಬಿಂದು

ವಿನಲ್ಲಿ ಕೇಂದ್ರೀಕೃತವಾಗದೆ ಹಲವಾರು ಬಿಂದುಗಳಲ್ಲಿ ಕೇಂದ್ರೀ
ಕೃತವಾಗಿ ಅಸ್ಪಷ್ಟ ಬಿಂಬಗಳನ್ನು ಉಂಟುಮಾಡುವುವು. ಈ
ದೋಷವು ಹತ್ತಿರದೃಷ್ಟಿ ಮತ್ತು ದೂರದೃಷ್ಟಿ ದೋಷಗಳೊಂದಿಗೆ
ಬೆರತಿರಬಹುದು. ಕರಿಯ ಗುಡ್ಡೆಯ ಮೇಲಿನ ಕಲೆಗಳೂ ಕೂಡ
ಅಸಮ ದೃಷ್ಟಿಯನ್ನುಂಟುಮಾಡಬಲ್ಲದು. ಈ ದೋಷವುಳ್ಳ
ವ್ಯಕ್ತಿಯ ದೃಷ್ಟಿಯು ಒಂದು ಗಾಜಿನ ಲೋಟದ ಮೂಲಕ
ನೋಡಿದಂತಿರುವುದು. ಒಮ್ಮೊಮ್ಮೆ ಬಿಂಬಗಳ ಅಸಮಾನತೆ
ಯಿಂದ ದ್ವಿದೃಷ್ಟಿ ಕಾಣಬಹುದು, ಈ ದೋಷವನ್ನು ಸರಿಪಡಿ
ಸುವ ಮಸೂರಗಳನ್ನು ಕನ್ನಡಕದಲ್ಲಿ ಸೇರಿಸಿ ಹಾಕಿಕೊಳ್ಳುವುದ
ರಿಂದ ಸ್ಪಷ್ಟದೃಷ್ಟಿಯನ್ನು ಹೊಂದಲು ಸಾಧ್ಯ.

ಈ ದೋಷವು ಸ್ವಲ್ಪವಿದ್ದಲ್ಲಿ ಮಗುವು ಇದನ್ನು ಗಮನಿಸ
ದೆಯೇ ಇರಬಹುದು. ಅಲ್ಲದೆ ಓದುವ ಚಾರ್ಟಿನ ಸಾಲುಗಳನ್ನು
ಕೂಡ ಸರಿಯಾಗಿ ಓದಬಹುದು. ಬಿಂಬವನ್ನು ಸ್ಪಷ್ಟಗೊಳಿಸಲು
ದೂರಕ್ಕೆ ತಕ್ಕಂತೆ ಹೊಂದಿಸಿಕೊಳ್ಳುವ ಶಕ್ತಿಯನ್ನು ಪದೇ
ಪದೇ ಉಪಯೋಗಿಸಲು ಯತ್ನಿಸುವುದು. ಆದರೆ ಇದರಿಂದ
ಪ್ರಯೋಜನವಾಗದೆ ಮತ್ತಷ್ಟು ಕಣ್ಣಿಗೆ ತ್ರಾಸವು ಹೆಚ್ಚುವುದು.
ಇವರ ಜೊತೆಗೆ ನರಗಳ ನಿಶ್ಶಕ್ತಿಯೂ ಸೇರಿಕೊಂಡು, ತಲೆ
ನೋವು, ತಲೆ ಸುತ್ತುವಿಕೆ, ವಮನ ವಾಂತಿಯ ಚಿನ್ಹೆಗಳು
ದೋಷದ ಪ್ರಮಾಣಕ್ಕನುಗುಣವಾಗಿ ಕಾಣಿಸಿಕೊಳ್ಳುವುವು. ಈ
ದೋಷದ ಜೊತೆಯಲ್ಲಿ ಹತ್ತಿರದೃಷ್ಟಿ ಮತ್ತು ದೂರದೃಷ್ಟಿಯ
ದೋಷಗಳು ಸೇರಿಕೊಂಡು ಚಿನ್ಹೆಗಳನ್ನು ಉಲ್ಬಣಗೊಳಿಸುವುವು.

(4) ಎರಡು ಕಣ್ಣುಗಳ ಏಕದೃಷ್ಟಿಯ ದೋಷಗಳು

ಎರಡು ಕಣ್ಣುಗಳ ಏಕದೃಷ್ಟಿಯು ಮಗುವಿನ ಭಾವೀ ಜೀವನದ

ಅಮೂಲ್ಯ ಸಂಪತ್ತು. ಇದರ ಸಹಾಯದಿಂದ ಮಗುವು ಪದಾರ್ಥ ಗಳ ಘನವನ್ನೂ ಮತ್ತು ಆಳವನ್ನೂ ಅರ್ಥಮಾಡಿಕೊಳ್ಳಬಲ್ಲದು. ಇದನ್ನು ಅರ್ಥಮಾಡಿಕೊಳ್ಳುವ ಅದ್ಭುತ ಶಕ್ತಿಯು ಮನಸ್ಸಿನಲ್ಲಿರುವುದು. ಈ ಶಕ್ತಿಯು (ಅ) ಎರಡು ಕಣ್ಣುಗಳ ಸರಿಯಾದ ಮತ್ತು ಸಮನಾದ ದೃಷ್ಟಿ; (ಆ) ಯಾವ ದೂರಕ್ಕಾದರೂ ವಸ್ತುಗಳನ್ನು ನೋಡುವಾಗ ಎರಡು ಕಣ್ಣುಗಳ ಸಂಪೂರ್ಣ ಸಹಕಾರ; (ಇ) ಎರಡು ಕಣ್ಣುಗಳ ಎರಡು ಬಿಂಬಗಳನ್ನು ಒಂದಾಗಿ ಮಿಲನಗೊಳಿಸುವ ಮನಸ್ಸಿನ ಶಕ್ತಿ—ಇವುಗಳನ್ನು ಅವಲಂಬಿಸಿರುತ್ತದೆ. ಇವುಗಳಿಗೆ ಯಾವ ಹಂತದಲ್ಲಾದರೂ ಅಡಚಣೆಯು ಬಂದಲ್ಲಿ ಎರಡು ಕಣ್ಣುಗಳ ಏಕದೃಷ್ಟಿಗೂ ಮತ್ತು ಘನ ದೃಷ್ಟಿಗೂ ಭಂಗವುಂಟಾಗುವುದು. ಇದರ ಫಲವಾಗಿ 'ವರಸೆಗಣ್ಣು' ಅಥವಾ ಮೆಳ್ಳಗಣ್ಣು 'ಓರಗಣ್ಣು' ಗಳ ವಕ್ರದೃಷ್ಟಿಯು ಹುಡುಗರಲ್ಲಿ ತಲೆದೋರುವುದು. ಇದು ಸಾಧಾರಣವಾಗಿ ಮಗುವು ಹತ್ತಿರದ ವಸ್ತುಗಳನ್ನು ನೋಡಲು ಕುತೂಹಲವನ್ನು ವ್ಯಕ್ತಪಡಿಸುವ ವಯಸ್ಸಿನಲ್ಲಿ ಅಂದರೆ 2 ರಿಂದ 3 ರ ವಯಸ್ಸಿನಲ್ಲಿ ಕಾಣಿಸಿಕೊಳ್ಳುವುದು. ತಾಯಿಯು ಮಗುವು ಒಂದು ಬಗೆಯಾಗಿ ಹೇಗೋ ನೋಡುತ್ತದೆಂದು ಹೇಳುವುದುಂಟು. ಜೊತೆಗೆ ದಡಾರ, ಸಿಡುಬು, ಜ್ವರ, ಇನ್‌ಫ್ಲ್ಯೂಯೆನ್‌ಜ, ಟೈಫಾಯಿಡ್ ರೋಗ ಬಂದು ನಿಂತ ನಂತರ ಈ ಬಗೆಯ ದೋಷವು ಕಂಡರೂ ಗಮನಿಸದಿರುವ ತಂದೆತಾಯಿಗಳೂ ಉಂಟು.

ಓರೆಗಣ್ಣಿನಲ್ಲಿ ಮೂರು ಬಗೆಯುಂಟು: (1) ಲಕ್ವವಿಲ್ಲದ ಓರೆಗಣ್ಣು (Non-paralytic squint): ಇದು ಸಾಧಾರಣವಾಗಿ 2 ರಿಂದ 4 ವರ್ಷದೊಳಗೆ ಕಾಣಿಸಿಕೊಳ್ಳುವುದು. ಇದು ಒಂದು ಕಣ್ಣಿಗೆ ಸೀಮಿತವಾಗಿರಬಹುದು ಇಲ್ಲವೆ ಎರಡು ಕಣ್ಣುಗಳಲ್ಲೂ ಒಂದಾದ ಮೇಲೆ ಇನ್ನೊಂದರಲ್ಲಿ ಬದಲಿಸಬಲ್ಲ

ಓರೆಗಣ್ಣಾಗಿರಬಹುದು (Alternating squint) (2) ಗುಪ್ತ ಓರೆಗಣ್ಣು (Latent squint) ಮತ್ತು (3) ಲಕ್ವಬಡಿದ ಓರೆಗಣ್ಣು (Paralytic squint).

(1) ಲಕ್ವವಿಲ್ಲದ ಓರೆಗಣ್ಣು

ಹುಟ್ಟಿದ ಶಿಶುವಿನ ಕಣ್ಣುಗಳು ಒಳಕ್ಕೆ, ಹೊರಕ್ಕೆ, ಮೇಲಕ್ಕೆ ಇಲ್ಲವೆ ಕೆಳಕ್ಕೆ ಯಾವ ಕಡೆಗಾದರೂ ಗುರಿಯಿಲ್ಲದೆ ಚಲಿಸುತ್ತಿರು ತ್ತವೆ. ಬಿಂಬಗಳನ್ನು ಮಿಲನಗೊಳಿಸುವ ಶಕ್ತಿಯು ಬೆಳವಣಿಗೆಯ ಪೂರ್ಣತೆಯನ್ನು ಮುಟ್ಟಿರುವುದಿಲ್ಲ. ಆರು ತಿಂಗಳಾದರೂ ಕಣ್ಣು ಗುಡ್ಡೆಗಳ ಚಲನವಲನಗಳಲ್ಲಿ ಸಹಕಾರ ಮೂಡದಿದ್ದಲ್ಲಿ ನೇತ್ರ ಪರೀಕ್ಷೆ ಅಗತ್ಯ. ಎರಡು ಕಣ್ಣುಗಳಲ್ಲಿ ದೃಷ್ಟಿಯಲ್ಲಿ ಅಸಮಾನತೆ ಇಲ್ಲವೆ ದೂರದೃಷ್ಟಿಯ ದೋಷದ ಹೆಚ್ಚಳವಿದ್ದಲ್ಲಿ, ಇಲ್ಲವೆ ಹುಟ್ಟು ಹತ್ತಿರ ದೃಷ್ಟಿಯ ಹೆಚ್ಚಳವಿದ್ದಲ್ಲಿ ಓರೆಗಣ್ಣು ಮೂಡುವ ಸಾಧ್ಯತೆಯುಂಟು. ಆದರಲ್ಲೂ ಅನುವಂಶೀಯ ತಳಹದಿ ಇದ್ದ ರಂತೂ ಓರೆಗಣ್ಣು ತೋರುವ ಸಾಧ್ಯತೆ ಹೆಚ್ಚಿರುತ್ತದೆ. ಎರಡು ಕಣ್ಣುಗುಡ್ಡೆಗಳು ಮೂಗಿನ ಕಡೆಗೆ ತಿರುಗಿರಬಹುದು. ಇಲ್ಲವೆ ಕಿವಿಯಕಡೆಗೆ ಹೊರಳಿರಬಹುದು; ಇಲ್ಲವೆ ಒಂದು ಕಣ್ಣುಗುಡ್ಡೆ ಮೇಲಕ್ಕೆ ಇನ್ನೊಂದು ಕೆಳಗಿನ ಮಟ್ಟಕ್ಕಿರಬಹುದು.

ಮಗುವು ದ್ವಿದೃಷ್ಟಿಯಿಂದ ಪಾರಾಗಲು ಕೊರಳನ್ನು ಒಂದು ಕಡೆಗೆ ಕೊಂಕಿಸುವುದುಂಟು. ಈ ರೀತಿಯ ವಿಶೇಷ ಭಂಗಿಯಿಂದ ಕಣ್ಣುಗಳ ಬಿಂಬಗಳನ್ನು ಆದಷ್ಟು ಹತ್ತಿರಕ್ಕೆ ತಂದು ಮಿಲನ ಗೊಳಿಸಲು ಯತ್ನಿಸುವುದು. ಇದು ಅಸಾಧ್ಯವಾದಲ್ಲಿ ಅಸ್ಪಷ್ಟ ತೆಯ ಬಿಂಬವನ್ನು ಅದುಮಿಟ್ಟು ನಿರ್ಲಕ್ಷಿಸುವುದು. ಇದರಿಂದ ಸೋಮಾರಿಯಾಗುತ್ತಿರುವ ಕಣ್ಣು ದೃಷ್ಟಿಯನ್ನು ಕಳೆದುಕೊಳ್ಳು

ವುದು. ಆದರಿಂದ ಕೊರಳು ಕೊಂಕಿರುವ ಮಕ್ಕಳ ದೃಷ್ಟಿ ಪರೀಕ್ಷೆ ಅಗತ್ಯ. ಈ ದೋಷವನ್ನು ಎಳೆಯ ಹಂತದಲ್ಲೇ ಸರಿಪಡಿಸ ದಿದ್ದಲ್ಲಿ ಮಗುವಿನ ಭಾವೀಜೀವನವೇ ಪೂರ್ಣವಾಗಿ ಬದಲಿಸು ವುದು. ಈ ಮಗುವು ಇತರ ಸರಿಯಾಗಿರುವ ಮಕ್ಕಳ ಗುಂಪಿಂದ ಕೂಡಲೇ ಬೇರೆಯಾಗುವುದು. ಇದರ ಸಹಪಾಠಿಗಳು ತಿಳಿಯದೆ ಈ ಮಗುವನ್ನು ಕ್ರೂರ ದೃಷ್ಟಿಯಿಂದ ನೋಡುವರು. ಮಗು ವನ್ನು ಅಡ್ಡ ಹೆಸರುಗಳಿಂದ "ಒಕ್ಕಣ್ಣ, ಶುಕ್ರಾಚಾರಿ, ಓರೆಗಣ್ಣು ಒಂದುವರೆ ಕಣ್ಣು" ಮುಂತಾದ ಹಾಸ್ಯದ ಹೆಸರುಗಳಿಂದ ಕೂಗುತ್ತಾ ಮಗುವಿನ ಎಳೆಯ ಮನಸ್ಸನ್ನು ನೋಯಿಸುವರು. ತಿರುಗಿದ ಕಣ್ಣು ಉಳಿದ ಕಣ್ಣಂತೆ ಸರಿಯಾಗಿ ನೋಡಲು ಆಗದೆ ದೃಷ್ಟಿಹೀನತೆಯನ್ನು ಹೊಂದುವುದು. ಆಟಗಳಲ್ಲಿ ಭಾಗವಹಿಸದೆ, ನಾಚಿಕೆಯ ಮನೋಭಾವವನ್ನು ಹೊಂದಿ, ಪುಸ್ತಕಗಳನ್ನು ಓದು ವುದರಲ್ಲೇ ಕಾಲವನ್ನು ನೂಕಬೇಕಾಗುವುದು. ಇನ್ನು ಕೆಲವು ಮಕ್ಕಳು ತಮ್ಮ ಕೀಳು ಭಾವನೆಯನ್ನು ಹೊರಗೆಡಹದೆ ತಮ್ಮ ಜೊತೆಯ ಹುಡುಗರ ಸಹವಾಸವನ್ನು ಬಿಟ್ಟು, ತನ್ನ ವಯಸ್ಸಿ ಗಿಂತ ಕಡಿಮೆಯಾಗಿರುವ ಮಕ್ಕಳೊಂದಿಗೆ ಬೆರೆತು, ಅವರ ಮೇಲೆ ತಮ್ಮ ಪ್ರಭಾವವನ್ನು ಮೀರಿ ಅವರ ಗುಂಪಿಗೆ ತಾವೇ ಮುಂದಾ ಳಾಗುವುದುಂಟು. ಈ ತರಹದ ಅಸಾಧಾರಣ ವ್ಯಕ್ತಿತ್ವದ ಬದ ಲಾವಣೆಗಳನ್ನು ಸಕಾಲದಲ್ಲಿ ಗೊತ್ತುಹಚ್ಚಿ ಸರಿಪಡಿಸುವುದರಿಂದ ಮಗುವಿನಲ್ಲಿನ ವ್ಯಕ್ತಿತ್ವದ ಬದಲಾವಣೆಗಳನ್ನು ಸುಲಭವಾಗಿ ತಡೆ ಗಟ್ಟಬಹುದು.

ಎಷ್ಟೋ ವೇಳೆ ತಾಯಿಯೇ ತನ್ನ ಮಗುವಿಗೆ ಓರೆಗಣ್ಣಿರು ವುದನ್ನು ಪತ್ತೆಹಚ್ಚುವಳು. ಕೆಲವರು ಮಗುವು ಏನೋ ಹೀಗೆ ಮಾಡುತ್ತದೆಂದು ಉದಾಸೀನ ಮಾಡುವುದೂ ಉಂಟು; ಇನ್ನೂ ಕೆಲವರು 'ಮೆಳ್ಳಗಣ್ಣು' ಅದೃಷ್ಟವೆಂದು ತಿಳಿದು ಸುಮ್ಮನಿರು

ವುದೂ ಉಂಟು. ಗಂಡುಮಗುವಿಗೆ ಬಲಗಣ್ಣು ಓರೆಯಿದ್ದ
ಅದೃಷ್ಟಶಾಲಿಯೆಂತಲೂ, ಹೆಣ್ಣುಮಗುವಿಗೆ ಎಡಗಣ್ಣು ಓ
ಇದ್ದರೆ ಅದೃಷ್ಟವಂತೆಯೆಂತಲೂ ಮೂಢಭಾವನೆಗಳು ಜ
ಸಾಮಾನ್ಯರಲ್ಲಿ ಬೇರೂರಿರುವುದರಿಂದ ಈ ದೋಷವು ಹಾಗೆಯೆ
ಬೆಳೆಯಲಿಕ್ಕೆ ಅವಕಾಶವಿರುತ್ತೆ. ಎಷ್ಟೋಸಾರಿ 'ನಿಮ್ಮ ಮಗುವಿ
ಒಂದು ಬಗೆಯ ಓರೆನೋಟವಿದೆ' ಎಂದರೆ ಸಾಕು; ತಾಯಿಯ
ಸಿಟ್ಟಿಗೆದ್ದು 'ನಮ್ಮ ಮಗ ಹಾಗೆ ಎಂದಿಗೂ ನೋಡುವುದಿ
ವೆಂದು' ಸಾಧಿಸುವುದೂ ಉಂಟು. ಇನ್ನು ಕೆಲವರು ಮಗ
ಬೆಳೆಯುತ್ತಾ ಓರೆನೋಟ ಸರಿಹೋಗುವುದೆಂದು ತಿಳಿದು ಸುವ
ನಿರುವುದೂ ಉಂಟು. ಪಾಶ್ಚಿಮಾತ್ಯ ದೇಶಗಳಲ್ಲಿ ಓರೆಗಣ
ಇರುವ ಮಕ್ಕಳು ಒಂದು ಬಗೆಯ ಕೆಟ್ಟ ಅದೃಷ್ಟವನ್ನು ತರುತ್ತಾ
ರೆನ್ನುವ ನಂಬಿಕೆಯುಂಟು; ಅಲ್ಲದೆ ದೊಡ್ಡವರಾದ ಮೇಲೆ ಮೆ
ಗಣ್ಣಿನವರಿಗೆ ಕೆಲಸ ದೊರಕುವುದು ಕಷ್ಟ. ಅದರಿಂದ ತಂ
ತಾಯಿಗಳು ತಮ್ಮ ಮಕ್ಕಳಿಗೆ ಓರೆಗಣ್ಣು ಕಂಡೊಡನೆಯೇ ನೇತ್ರ
ಚಿಕಿತ್ಸಕರ ಹತ್ತಿರಕ್ಕೆ ಧಾವಿಸುವರು. ನೇತ್ರವೈದ್ಯರು ಆ
ಮಕ್ಕಳನ್ನು ಪರೀಕ್ಷಿಸಿ, ವಯಸ್ಸಿಗನುಗುಣವಾಗಿ ದೃಷ್ಟಿಯನ
ಸರಿಪಡಿಸಲು ಯತ್ನಿಸುವರು. ಮೊದಲು ಎರಡು ಕಣ್ಣುಗ
ದೃಷ್ಟಿಯನ್ನು ಪರೀಕ್ಷಿಸಿ ದೃಷ್ಟಿಯ ದೋಷಗಳನ್ನು ಸರಿಪಡಿ
ತಕ್ಕಂತಹ ಕನ್ನಡಕಗಳನ್ನು ಸೂಚಿಸುವರು. ಈ ಕನ್ನಡಕಗಳನ
ಹಾಕುವುದರಿಂದ ಕೆಲವು ಮಕ್ಕಳ ಓರೆನೋಟವು ಸರಿಹೋಗು
ದುಂಟು. ಹಾಗೆ ಸರಿಹೋಗದ ಮಕ್ಕಳಿಗೆ ಸರಿಯಿರುವ ಕಣ್ಣನ
ಪೂರ್ಣವಾಗಿ ಮುಚ್ಚಿ, ದೃಷ್ಟಿ ಕಡಿಮೆಯಿರುವ ಕಣ್ಣಿಂ
ನೋಡುವ ಅಭ್ಯಾಸವನ್ನು ಮಾಡಿಸುವರು. ಹೀಗೆ ಮಾಡುವು
ರಿಂದ ದೃಷ್ಟಿಹೀನ ಕಣ್ಣಲ್ಲಿ ದೃಷ್ಟಿ ಹಿಂತಿರುಗುವುದು. ಈ ಕಣ್ಣಿ
ದೃಷ್ಟಿಯು ಸ್ವಲ್ಪ ಹೆಚ್ಚುಕಡಿಮೆ ಸರಿಯಿರುವ ಕಣ್ಣಿನ ದೃಷ್ಟಿಂ

ಹಂತಕ್ಕೆ ಬಂದಾಗ ಎರಡು ಕಣ್ಣುಗಳು ಎರಡು ಬಿಂಬಗಳನ್ನು ಕೂಡಿಸುವುದನ್ನು ಅಭ್ಯಾಸಿಸುವ ಯಂತ್ರದ ಮೂಲಕ ಕಲಿಸಿ ಕೊಡುವರು. ದೋಷವು ಹೆಚ್ಚಿದ್ದಲ್ಲಿ, ಶಸ್ತ್ರಚಿಕಿತ್ಸೆಯಿಂದ ಸೊಟ್ಟ ಗಣ್ಣನ್ನು ನೆಟ್ಟಗೆಮಾಡಿ ಅನಂತರ ಯಂತ್ರದ ಸಹಾಯದಿಂದ ಎರಡು ಕಣ್ಣುಗಳ ಏಕದೃಷ್ಟಿ ಮೂಡುವಂತೆ ಶ್ರಮಿಸುವರು.

ಎಂಟು ವರ್ಷ ಮುಟ್ಟಿದನಂತರ ಶಸ್ತ್ರಚಿಕಿತ್ಸೆಯಿಂದ ಸೊಟ್ಟ ಗಣ್ಣನ್ನು ನೆಟ್ಟಗೆ ಮಾಡಿದರೂ, ಆ ಕಣ್ಣಲ್ಲಿ ದೃಷ್ಟಿಯು ಹಿಂತಿರುಗುವುದಿಲ್ಲ.

## (2) ಗುಪ್ತ ಓರೆಗಣ್ಣು

ಹಲವರಲ್ಲಿ ಗುಪ್ತ ಓರೆಗಣ್ಣಿನ ದೋಷ ಕಾಣಿಸಿಕೊಳ್ಳುವುದುಂಟು. ಈ ಸ್ಥಿತಿಯಲ್ಲಿ ಕಣ್ಣುಗಳೆರಡರಲ್ಲಿ ಸಹಜವಾದ ಸಹಕಾರವು ಕುಂದಿ ಕಣ್ಣುಗಳು ಓರೆಯಾಗಿ ಹೋಗಲು ತವಕಪಡುವುವು. ಇದರಲ್ಲಿ ಕಣ್ಣಿನ ತ್ರಾಸದ ಚಿನ್ಹೆಗಳು ಕಾಣಿಸಿದರೂ, ಮನಸ್ಸು ಕಣ್ಣುಗಳ ಮಾಂಸಖಂಡಗಳ ಚಲನವಲನಗಳ ಅಸಹಕಾರವನ್ನು ಲೆಕ್ಕಿಸದೆ ಆದಷ್ಟು ಬಿಂಬಗಳ ಮಿಲನವನ್ನುಂಟು ಮಾಡಲು ಯತ್ನಿಸುವುದು. ಅಲ್ಲದೆ ಎರಡು ಕಣ್ಣುಗಳ ಏಕದೃಷ್ಟಿಯನ್ನು ಬಲವಂತದಿಂದ ಲಭಿಸುವಂತೆ ಸರ್ವಯತ್ನವನ್ನು ಮಾಡುವುದು. ಆದುದರಿಂದ ಈ ಸ್ಥಿತಿಯು ಬಹಳ ಹೊತ್ತು ಬಾಳಲಾರದು. ಬಹಳ ಹೊತ್ತು ಬಲವಂತದಿಂದ ಏಕದೃಷ್ಟಿಯನ್ನು ಇರಿಸಿಹೋದರೆ ಕೂಡಲೇ ಕಣ್ಣುಗಳು ಹೆಚ್ಚು ಸೋಲನ್ನು ಅನುಭವಿಸುವುವು. ಅಲ್ಲದೆ ಸಾಕಾಗಿರುವಾಗ ಮನಸ್ಸಿನ ಮಿಲನ ಶಕ್ತಿಯು ಕಣ್ಣುಗಳ ಸಹಕಾರವನ್ನು ಗೆಲ್ಲಲಾರದೆ ತನ್ನ ಸೋಲನ್ನು ಒಪ್ಪಿಕೊಳ್ಳಬೇಕಾಗುವುದು. ಇದರಿಂದ ಕಣ್ಣು ಓರೆಯಾಗಿ

ದ್ವಿದೃಷ್ಟಿ. ಮಂಜುದೃಷ್ಟಿ. ತಲೆನೋವು. ಕಣ್ಣಲ್ಲಿ ನೀರು ಸುರಿಯ
ವುದು, ಕಣ್ಣಲ್ಲಿ ಬಳಲಿಕೆ ಮತ್ತು ಉರಿ ಕಾಣಿಸಿಕೊಳ್ಳುವುದು
ಓದುವುದು ಮತ್ತೆ ಹತ್ತಿರ ಕೆಲಸಮಾಡುವುದು. ನೋವುಂ
ಮಾಡುವುದು. ದೂರದಿಂದ ಹತ್ತಿರಕ್ಕೆ ನೋಡುವುದು ಕಷ್ಟವೆ
ಸುವುದು. ವಾಹನಗಳಲ್ಲಿ ಚಲಿಸುವಾಗ ತಲೆ ಸುತ್ತುವುದು.
ಗುಪ್ತ. ಓರೆಗಣ್ಣು, ಮನಸ್ಸಿನ ಮಿಲನಶಕ್ತಿಯು ಒತ್ತಾಯ
ಹೆಚ್ಚಿದರೆ ಮತ್ತೆ ಸರಿಹೋಗಬಹುದು. ಇಲ್ಲವೇ ಕಣ್ಣಿನ ಮಾಂ
ಖಂಡಗಳ ಅಸಹಕಾರ ಹೆಚ್ಚಿ ನಿಜವಾದ ಓರೆಗಣ್ಣು ಉಂಟಾ
ಬಹುದು.

ಕಣ್ಣು ಮೂಗಿನ ನೇರಕ್ಕೆ ತಿರುಗುವ ಚಿನ್ಹೆಗೆ ಒಳ ತಿರುಗ
ಗಣ್ಣೆಂದೂ (Esophoria), ಕಿವಿಯ ಕಡೆಗೆ ತಿರುಗುವಂತಿದ್ದ
(Exophoria) ಹೊರ ತಿರುಗುಗಣ್ಣೆಂದು ಕರೆಯುವರು
ಮೇಲಕ್ಕೆ ತಿರುಗಿರುವ ಕಣ್ಣಿಗೆ ಮೇಲ್ತಿರುಗುಗಣ್ಣೆಂದು ಕರೆಯು
ವರು.

ಗುಪ್ತ ಓರೆಗಣ್ಣನ್ನು ಪತ್ತೆಹಚ್ಚುವುದು ಸ್ವಲ್ಪ ಕಷ್ಟ ; ಕಣ್ಣಿನ
ಮಾಂಸಖಂಡಗಳ ಚಲನವಲನಗಳನ್ನು ಗೊತ್ತುಹಚ್ಚುವ ಸಾಧ
ಗಳ ಮೂಲಕ ಪತ್ತೆಹಚ್ಚಬೇಕು. ಈ ದೋಷಗಳನ್ನು ತಿದ್ದ
ಕೆಲವು ಕಣ್ಣಿನ ವ್ಯಾಯಾಮಗಳುಂಟು. ಕಣ್ಣಿನ ದೃಷ್ಟಿ ದೋ
ಗಳನ್ನು ಸರಿಪಡಿಸುವ ಸಾಧನಗಳಿಂದಲೂ ಮತ್ತು ಈ ವ್ಯಾಯಾ
ಗಳನ್ನು ನೇತ್ರ ಚಿಕಿತ್ಸಕರ ಸಲಹೆಯಂತೆ ಅಭ್ಯಸಿಸುವುದರಿಂದಲ
ಈ ದೋಷಗಳನ್ನು ಸರಿಪಡಿಸಿಕೊಳ್ಳಬಹುದು.

(3) ಲಕ್ವಬಡಿದ ಓರೆಗಣ್ಣು

ಕಣ್ಣಿನ ಚಲನವಲನಗಳಿಗೆ ಸಂಬಂಧಿಸಿದ ಮಾಂಸಖಂಡಗಳ
ಲಕ್ವಬಡಿದಲ್ಲಿ ಈ ಸ್ಥಿತಿಯುಂಟಾಗುತ್ತದೆ. ಇದು ಪ್ರಸವ ಕಾಲದ

ಕಷ್ಟ ಹೆರಿಗೆಯಿಂದಾಗಬಹುದು. ಇಲ್ಲವೆ ವಯಸ್ಸಾದ ಮೇಲೆ ನರಗಳ ರೋಗದಿಂದಾಗಲೀ ಇಲ್ಲವೆ ತಲೆಯ ಪೆಟ್ಟಿನಿಂದಾಗಲೀ ಕಾಣಿಸಿಕೊಳ್ಳಬಹುದು. ಲಕ್ವಬಡಿದ ಮಾಂಸಖಂಡದ ಚಲನೆಯ ದಿಕ್ಕಿಗೆ ಕಣ್ಣುಗುಡ್ಡೆಯನ್ನು ತಿರುಗಿಸಲಾಗುವುದಿಲ್ಲ. ನರಗಳಿಗೆ ಇಲ್ಲವೆ ಮೆದುಳಿಗೆ ತಗುಲಿದ ಪರಂಗಿ ರೋಗದ ಪರಿಣಾಮ ವಾಗಿ ಈ ಸ್ಥಿತಿ ಕಾಣಿಸಿಕೊಳ್ಳಬಹುದು. ಮೆದುಳಿನ ಊತ, ಕಣ್ಣುಗುಡ್ಡೆಯ ಗೂಡಿಗೆ ಪೆಟ್ಟು. ಇಲ್ಲವೆ ಡಿಫ್ತೀರಿಯಾ ರೋಗದ ವಿಷವ್ಯಾಪ್ತಿ—ಇವು ಕೂಡ ಈ ಸ್ಥಿತಿಯನ್ನುಂಟುಮಾಡಬಲ್ಲದು. ವಯಸ್ಸಾದವರಲ್ಲಿ ಪ್ರಧಾನ ಚಿನ್ಹೆ ದ್ವಿದೃಷ್ಟಿ, ಇದು ವ್ಯಕ್ತಿಯ ಕಾರ್ಯಾಚರಣೆಗಳಿಗೆ ಬಹಳ ಅಡಚಣೆಯನ್ನುಂಟುಮಾಡುವುದು. ಮಕ್ಕಳಲ್ಲಿ ದ್ವಿದೃಷ್ಟಿ ಪ್ರಧಾನ ಚಿನ್ಹೆಯಲ್ಲ. ಯಾಕೆಂದರೆ ಅವರು ಬೇಗನೆ ಒಂದು ಬಿಂಬವನ್ನು ಅದುಮಿ ನಿರ್ಲಕ್ಷಿಸುವರು. ಮಧು ಮೂತ್ರವು ಒಮ್ಮೊಮ್ಮೆ ಈ ಸ್ಥಿತಿಯನ್ನುಂಟುಮಾಡಬಲ್ಲದು. ರೋಗದ ಕಾರಣದ ಕಡೆ ಗಮನಹರಿಸಿ ಚಿಕಿತ್ಸೆ ನಡೆಸಬೇಕು. ಶಸ್ತ್ರಚಿಕಿತ್ಸೆಗೆ ಕೊನೆಯ ಪಕ್ಷ ಆರು ತಿಂಗಳಾದರೂ ಕಳೆಯಬೇಕು ದ್ವಿದೃಷ್ಟಿಯಿಂದ ಪಾರಾಗಲು ಲಕ್ವಬಡಿದ ಕಣ್ಣಿನ ಮುಂದೆ ಮಂಜುಗಾಜನ್ನು ಬಳಸಬೇಕು.

# 8. ಆಹಾರಾಂಶಗಳ ಅಭಾವದಿಂದುಂಟಾಗುವ ಕಣ್ಣಿನ ರೋಗಗಳು

4. ಹಿಂಗುಗಣ್ಣು (Kerato malacia)

ಆಹಾರಾಂಶಗಳ ಅಭಾವವು ನಮ್ಮ ದೇಶದ ಕುರುಡಿಗೆ ಸರ್ವ ಸಾಮಾನ್ಯವಾದ ಕಾರಣವಾಗಿರುತ್ತದೆ. ಸಮತೂಕದ ಆಹಾರವು, ಜೀವಸತ್ವಗಳ ಪ್ರಮಾಣವು ಶರೀರದ ಆರೋಗ್ಯಕ್ಕೆ ಅತ್ಯವಶ್ಯಕ. ಕೂಲಿಕಾರರಲ್ಲಂತೂ ಈ ಆಹಾರಾಂಶಗಳ ಅಭಾವವು ಒಂದು ಸಮಸ್ಯೆ. ಬೊಂಬಾಯಿಯಲ್ಲಿನ ಕೂಲಿಕಾರರ ಗುಂಪಿನಲ್ಲಿ ಶೇಕಡ 14 ಮಂದಿ ರಾತ್ರಿಯ ಕುರುಡು, ಒಣಗಿರುವ ಪ್ರಕಾಶರಹಿತ ಬಿಳಿಯ ಗುಡ್ಡೆಗಳು, ಮತ್ತು ಹಿಂಗುಗಣ್ಣುಗಳಿಗೆ ಗುರಿಯಾಗಿರುತ್ತಾರೆಂದು ವರದಿಯಾಗಿದೆ. ಇವರ ದಿನಂಪ್ರತಿ ಆಹಾರವಲ್ಲಿ ಜಿಡ್ಡು, ಹಾಲು, ಬೆಣ್ಣೆ ಪದಾರ್ಥಗಳ ಮತ್ತು ಸಸಾರಜನಕ ವಸ್ತುಗಳ ಅಭಾವವು ಹೇರಳವಾಗಿರುತ್ತದೆ. ನಮ್ಮ ಆಹಾರವಲ್ಲಿ ಜೀವಸತ್ವಗಳ ಕೊರತೆಯಿದ್ದಲ್ಲಿ, ಹಿಟ್ಟು, ಕೊಬ್ಬು ಮತ್ತು ಸಸಾರ ಜನಕ. ಲೋಹವಸ್ತುಗಳು ಸರಿಯಾಗಿ ಉಪಯೋಗಿಸಲ್ಪಡುವುದಿಲ್ಲ. ಬಹಳ ದಿನಗಳಿಂದಲೂ ಜೀವಸತ್ವಗಳ ಅಭಾವದಿಂದ 'ಬೆರಿಬೆರಿ' ಸ್ಕರ್ವಿ, ಪೆಲಗ್ರ ಮುಂತಾದ ರೋಗಗಳು ಬರುವುವೆಂದು ತಿಳಿದ ವಿಷಯವಾಗಿರುತ್ತದೆ. ಇತ್ತೀಚೆಗೆ ಜೀವಸತ್ವಗಳ ಅಭಾವವು ರೋಗದ ಚಿನ್ಹೆಗಳನ್ನು ತೋರುವಷ್ಟಿಲ್ಲದ ಪ್ರಮಾಣದಲ್ಲಿ ನಮ್ಮಲ್ಲಿ ಹಲವರಲ್ಲಿ ಕಂಡುಬರುವುದೆಂಬುದು ಇತ್ತೀಚೆಗೆ ನಡೆಸಿದ ಸಂಶೋಧನೆಗಳಿಂದ ಬೆಳಕಿಗೆ ಬಂದಿರುತ್ತದೆ. ಈ ಬಗೆಯ ಅಗೋಚರವಾದ ಜೀವಸತ್ವಗಳ ಅಭಾವವು ನಮ್ಮ ದೇಹದಲ್ಲಿ ರೋಗವನ್ನು ತಡೆಗಟ್ಟುವ ಶಕ್ತಿಯನ್ನು ಕಡಿಮೆ ಮಾಡುವು

ದಲ್ಲದೆ ಇತರ ಬಗೆಯ ರೋಗಗಳಿಗೆ ದೇಹವನ್ನು ಸುಲಭವಾಗಿ ಈಡುಮಾಡುವುದು.

ಜೀವಸತ್ವ 'ಎ'ಯು ಕಣ್ಣಿನ ಆರೋಗ್ಯಕ್ಕೆ ಬಹು ಮುಖ್ಯವಾದುದು. ಇದನ್ನು ಕಣ್ಣಿನ ಜೀವಸತ್ವವೆಂದು ಕರೆಯುತ್ತಾರೆ. ಇದರ ಅಭಾವದಿಂದ ಹಿಂಗುಗಣ್ಣು, ಕರಿಯ ಗುಡ್ಡೆಯ ವ್ರಣಗಳು, ಬೆಳೆದು ಅವು ಬಿರಿದು ತೂತಾಗಿ ದೃಷ್ಟಿ ನಾಶವಾಗುವುದು. ಎಬರ್ಸ್‌ನ ಪತ್ರಗಳಲ್ಲಿ ಒಣಗುಗಣ್ಣಿನ ಉಲ್ಲೇಖವಿದೆ. ಹಿಂದೂ ವೈದ್ಯರೂ ಮತ್ತು ಈಜಿಪ್ಟ್ ದೇಶದ ವೈದ್ಯರೂ ಈ ರೋಗದ ವಿಷಯವನ್ನು ಅರಿತಿದ್ದರು. ಚಿಕಿತ್ಸಾ ರೂಪವಾಗಿ ಸಂಜೆಗತ್ತಲಿನ ರೋಗಿಗಳಿಗೆ ಕುರಿಯ ಅಥವಾ ಮೇಕೆಯ ಯಕೃತ್ತನ್ನು ಕೊಡುತ್ತಿದ್ದರು. ವೈದ್ಯಪಿತಾಮಹ ಹಿಪೋಕ್ರಿಟೀಸನು ಎತ್ತಿನ ಯಕೃತ್ತನ್ನು ಜೇನುತುಪ್ಪದಲ್ಲಿ ಅದ್ದಿ ದಿನಕ್ಕೆ ಎರಡುಸಾರಿ ತಿನ್ನುವಂತೆ ಹೇಳಿದ್ದರು. ಜಪಾನ್ ಮತ್ತು ಚೈನಾದಲ್ಲಿ ಕೋಳಿ ಅಥವಾ ಕುರಿಯ ಯಕೃತ್ತನ್ನು ಜೇನುತುಪ್ಪದಲ್ಲಿ ಅದ್ದಿ ತಿನ್ನಲು ಕೊಡುತ್ತಿದ್ದರು. 1861ರಲ್ಲಿ ಫ್ರಾನ್ಸ್‌ನ ಸೈನ್ಯದ ಸರ್ಜನ್‌ರಾದ ಬೈಜೂವರು ರಾತ್ರಿಯ ಕುರುಡಿನಿಂದ ನರಳುವ ರೋಗಿಗಳಿಗೆ ಮೀನು ಎಣ್ಣೆಯನ್ನು ಕುಡಿಯುವಂತೆ ಹೇಳಿದ್ದರು. ಈಸ್ಟರ್ ಹಬ ವನ್ನು ಆಚರಿಸುವವರಲ್ಲಿ ಬಹು ದಿನಗಳ ಉಪವಾಸದ ಫಲವಾಗಿ ಒಣಗಿದ ಸುಕ್ಕುಬೀಳುವ ಬಿಳಿಯ ಗುಡ್ಡೆಯ ಹೊರಪರೆ ಮತ್ತು ರಾತ್ರಿ ಕುರುಡು ಮತ್ತು ಹಿಂಗುಗಣ್ಣುಗಳು ಹೆಚ್ಚಿನ ಪ್ರಮಾಣದಲ್ಲಿ ಕಾಣಿಸಿದುವೆಂದು ರಷ್ಯನ್ ವೈದ್ಯರು ತಿಳಿಸಿದ್ದರು.

ಈಸ್ಟರ್ ಹಬ್ಬದ ಆಹಾರ ಪಥ್ಯದಲ್ಲಿ ಪ್ರಾಣಿಜನ್ಯ ವಸ್ತುಗಳು, ಹಾಲು ಬೆಣ್ಣೆಗಳು ವರ್ಜ್ಯವೆನಿಸಿದ್ದುವು. ಅವರ ಆಹಾರದಲ್ಲಿ

ಹೆಚ್ಚಾಗಿ ತರಕಾರಿ, ಸಸ್ಯಜನ್ಯ ಜಿಡ್ಡು ಪದಾರ್ಥಗಳು ಮಾತ್ರ ಸೇರಿ
ದ್ದವು. ಚಿಕಿತ್ಸೆಗೆಂದು ಅರ್ಧಬೇದ ಯಕೃತ್ ಮತ್ತು ಮೀನಿನ
ಎಣ್ಣೆಗಳನ್ನು ಕೊಡುತ್ತಿದ್ದರು. ಜಪಾನಿನ ಮೊರಿ, ಚೈನಾದ
ಪಿಲಾಟ್ ಮತ್ತು ಲಾಬ್ರಡಾರ್‌ನ ಐಕ್ರಾಡ್‌ರವರು ಈ ರೋಗದ
ಕಾರಣ ಜೀವಸತ್ವ 'ಎ'ಯ ಅಭಾವವೆಂದು ನಿರ್ಧರಿಸಿದರು.
1915 ರಲ್ಲಿ ಮೆಕಾಲಂರು ಮತ್ತು ಡೇವಿಸನ್‌ರು ಪ್ರಾಯೋ
ಗಿಕವಾಗಿ ಜೀವಸತ್ವ 'ಎ'ಯ ಅಭಾವವು ಒಣಗುಗಣ್ಣನ್ನು
ಉಂಟುಮಾಡಬಲ್ಲದೆಂದು ತೋರಿಸಿದರು. 1920 ರಲ್ಲಿ ಮೆಕ್ಯಾ
ರಿಸನ್ ಅವರು ಅಕ್ಕಿ ಮತ್ತು ಸಸ್ಯ ಸಂಬಂಧದ ಎಣ್ಣೆಗ
ಳಿಂದ ಮಾತ್ರ ಕೂಡಿದ ಆಹಾರವು ಒಣಗುಗಣ್ಣನ್ನು
ಉಂಟುಮಾಡುವುದೆಂದು ತಿಳಿಸಿದ್ದರು. 1920 ರಲ್ಲಿ ರೈಟ್‌ರವರು
ಬಿಳಿಯ ಗುಡ್ಡೆಯ ಹೊರಪದರದ ಬದಲಿಸಿದ ಬಣ್ಣವು ಜೀವ
ಸತ್ವ 'ಎ' ಅಭಾವದ ಮೊದಲ ಚಿನ್ಹೆ ಎಂದು ವಿವರಿಸಿದ್ದರು.
1919 ರಲ್ಲಿ ಬ್ಲಾಕ್ ಮತ್ತು ವಿಡ್‌ಮಾರ್ಕ್‌ರು ಕೋಪನ್‌ಹೆಗನ್
ನಲ್ಲಿ ಕೆನೆತೆಗೆದ ಹಾಲಿನಿಂದ ಬೆಳೆದ ಮಕ್ಕಳು ಒಣಗುಗಣ್ಣಿಗೆ
ತುತ್ತಾಗಿದ್ದರೆಂದು ಕಂಡಿದ್ದರು. ಎದೆ ಹಾಲಿಂದ ಬೆಳೆಸಿದ ಮಕ್ಕಳಲ್ಲಿ
ಈ ರೋಗವು ಕಂಡಿರಲಿಲ್ಲವೆಂಬ ಅಂಶವನ್ನು ಅವರು ಅರಿತಿದ್ದರು.

ಒಣಗುಗಣ್ಣು ಮತ್ತು ಹಿಂಗುಗಣ್ಣುಗಳು ಯುರೋಪು ಮತ್ತು
ಅಮೆರಿಕೆಯಲ್ಲಿ ಕಾಣಿಸಿಕೊಳ್ಳುವುದೇ ಅಪರೂಪ. ಅಂದರೆ ಅಲ್ಲಿ
ಯವರಲ್ಲಿ ಅವರ ಆಹಾರದಲ್ಲ ಆಹಾರಾಂಶಗಳ ಅಭಾವವೇ
ಇಲ್ಲವೆಂದು ಹೇಳಬಹುದಾಗಿದೆ. ಆದರೆ ಏಷ್ಯಾದ ಚೈನಾ, ಜಪಾನ್
ಮತ್ತು ಭಾರತ ದೇಶಗಳಲ್ಲಿ ಈ ರೋಗವು ಸರ್ವೇಸಾಮಾನ್ಯವಾಗಿ
ದಿನಂಪ್ರತಿ ನೋಡಬಹುದಾದ ರೋಗವಾಗಿದೆ. ಮದರಾಸು
ಮತ್ತು ಕಲ್ಕತ್ತ ನಗರಗಳಲ್ಲಿ ನಡೆಸಿದ ತನಿಖೆಗಳಿಂದ ಕುರುಡಿನ
ಕಾರಣಗಳಲ್ಲಿ ಶೇಕಡ 8 ರಷ್ಟು ಹಿಂಗುಗಣ್ಣೇ ಕಾರಣವೆಂದು

ಕಂಡುಬಂದಿರುತ್ತದೆ. ಒಣಗುಗಣ್ಣು ಮತ್ತು ಹಿಂಗುಗಣ್ಣುಗಳು ಎಳೆಯ ಮಕ್ಕಳಲ್ಲೇ ಅಧಿಕ ಪ್ರಮಾಣದಲ್ಲಿ ಕಾಣಿಸಿಕೊಳ್ಳುತ್ತವೆ. ಶಿಶುವಿನ ಮೊದಲ ವರ್ಷದಲ್ಲೇ ಈ ರೋಗ ಕಾಣಿಸಿಕೊಳ್ಳುವ ಪ್ರಮೇಯವೇ ಹೆಚ್ಚು. ದೊಡ್ಡವರಲ್ಲಿ ಕಂಡರೂ ಅತಿವಿರಳ ಮಾತ್ರ. ಇದು ಬಡತನಕ್ಕೆ ಗಂಟುಬಿದ್ದ ರೋಗ. ಅಂದರೆ ಶ್ರೀಮಂತರಲ್ಲಿ ಕಾಣಿಸಿಕೊಳ್ಳುವುದಿಲ್ಲ ಎಂದು ಹೇಳಲಾಗದು.

ರೋಗದ ಲಕ್ಷಣಗಳು: ಈ ರೋಗ ಕಾಣಿಸಿಕೊಂಡ ಮಕ್ಕಳ ಕಣ್ಣುಗಳಲ್ಲಿ ಬಿಳಿಯ ಗುಡ್ಡೆಯನ್ನು ಮುಚ್ಚಿರುವ ಸಂಧಿಪರೆಯಲ್ಲಿ ಬದಲಾವಣೆಗಳು ಕಾಣುವುವು. ತೇವವು ಕಡಿಮೆಯಾಗಿ ಕಣ್ಣೀರಿನ ಉತ್ಪತ್ತಿಯು ಕುಂದಿ, ಕಣ್ಣುಗುಡ್ಡೆಯು ಒಂದು ಬಗೆಯ ಒಣಗಿದ ಸ್ಥಿತಿಯನ್ನು ಪಡೆಯುವುದು. ಈ ಸ್ಥಿತಿಗೆ ಒಣಗುಗಣ್ಣು ಎನ್ನುವರು. ಸಂಧಿಪರೆಯ ಬಣ್ಣವು ಬದಲಿಸಿ ತೇವವಿಲ್ಲದೆ ಒಣಗಿ ಸುಕ್ಕು ಬೀಳುವುದು. ಹೊಳಪು ಮಾಯವಾಗಿ ತ್ರಿಕೋಣಾಕಾರದ ಬೆಳ್ಳಿಯ ಚುಕ್ಕಿಗಳು ಮತ್ತು ರೇಖೆಗಳು ಕರಿಯ ಗುಡ್ಡೆಯ ಮಗ್ಗುಲಲ್ಲಿ ಕಾಣುವುವು. ಬಿಳಿಯ ಚುಕ್ಕಿಗಳನ್ನು ಸವರಿ ತೆಗೆದರೂ ಮತ್ತೆ ಕಾಣಿಸಿಕೊಳ್ಳುವುವು. ಈ ಸ್ಥಿತಿಯಲ್ಲಿ 'ಎ' ಸತ್ವವನ್ನು ದೇಹಕ್ಕೆ ಕೊಟ್ಟರೂ ಕೂಡ ಸಂಧಿಪರೆಯಲ್ಲಾದ ಬದಲಾವಣೆಗಳು ಹೋಗುವುದು ದುರ್ಲಭ. ಕರಿಯ ಗುಡ್ಡೆಯ ಹೊಳಪು ಮಾಯವಾಗಿ ಒಣಗಿದಂತಾಗಿ ಪಾರದರ್ಶಕತ್ವವು ಕುಂಠಿತವಾಗುವುದು. ಕರಿಯ ಗುಡ್ಡೆಯ ಸೂಕ್ಷ್ಮತೆಯು ಮೊಟಕಾಗುವುದು. ಸಣ್ಣ ರೆಪ್ಪೆಗಳ ಅಂಚುಗಳು ಕೆಂಪಾಗಿ ಊದಿಕೊಳ್ಳುವುವು. ರೆಪ್ಪೆಮುಚ್ಚುವ ರಕ್ಷಣಾಕ್ರಿಯೆಯು ಮಾಯವಾಗುವುದು. ಒಂದು ಬಗೆಯ ರಾತ್ರಿಯ ಕುರುಡು ತಲೆದೋರುವುದು. ಕರಿಯ ಗುಡ್ಡೆಯು ವ್ರಣವಾಗಿ ತೂತುಬಿದ್ದು ಹಿಂಗುಗಣ್ಣು ಇಲ್ಲವೇ ದ್ರಾಕ್ಷಿಗಣ್ಣು ಪ್ರಾಪ್ತವಾಗುವುದು.

ಈ ರೋಗ ತಗಲಿದ ಮಕ್ಕಳು ರಾತ್ರಿಯಲ್ಲಿ ಸರಿಯಾಗಿ
ನೋಡಲಾಗುವುದಿಲ್ಲ. ತಟ್ಟೆಯಲ್ಲಿನ ಆಹಾರವನ್ನು ಗುರುತಿಸ
ಲಾರದೆ ತಡಕಾಡುತ್ತಾರೆ. ರಾತ್ರಿಯಲ್ಲಿ ದಾರಿಕಾಣದೆ ಮನೆ
ತಪ್ಪಿಸಿಕೊಳ್ಳುವ ಸಂಭವವುಂಟು. ಈ ರೋಗದಲ್ಲಿ ಚರ್ಮದ
ಆರೋಗ್ಯ ತಪ್ಪಿ, ಚರ್ಮವು ಒಣಗಿ ಸುಕ್ಕುಬೀಳುವುದು. ಕೂದಲ
ನಯ ತಪ್ಪಿ ಒರಟಾಗಿ ಉದುರುವುದು. ಬಾಯಿ ಒಣಗಿ, ಧ್ವನಿ
ಒರಟಾಗಿ ಕೆಮ್ಮು ಕಾಣಿಸಿಕೊಳ್ಳುವುದು. ನೆಗಡಿಯಾಗಿ ಮೂಗಿ
ನಲ್ಲಿ ಸುರಿಯುವುದು, ವಿಪರೀತ ಭೇದಿ, ಈ ರೋಗದ ಮೊದಲ
ಚಿನ್ಹೆಗಳು. ಉಸಿರುನಾಳದ ಊತ ಮತ್ತು ಬ್ರಾಂಕೋ
ನಿಮೋನಿಯಾ ರೋಗವು ಜೊತೆಗೆ ತಗಲುವುದುಂಟು.

ಶಿಥಿಲವಾದ ಕಡ್ಡಿಯಂತಿರುವ, ಉಬ್ಬಿದ ಹೊಟ್ಟೆಯ, ಒಣ
ಗಿದ ಸುಕ್ಕುಗಟ್ಟಿದ ಪ್ರಕಾಶರಹಿತ ಚರ್ಮದ, ಹೊಳಪಿಲ್ಲದ,
ಒಣಗಿದ ಕಾಂತಿಹೀನ ಕಣ್ಣುಗಳ. ರೋಧಿಸುವ ಗೆಲುವಿಲ್ಲದ
ಮೊಗದ ಅಂಧಶಿಶುಗಳನ್ನು ನೋಡಿದರೆ ಯಾರಿಗೆ ತಾನೆ ಮರುಕ
ಹುಟ್ಟುವುದಿಲ್ಲ. ಈ ನಿರ್ಭಾಗ್ಯ ಶಿಶುಗಳನ್ನು ಪಡೆದ ತಾಯಂದಿರು
ದೃಷ್ಟಿಹೊಂದುವ ಆಶೆಯಿಂದ ಚಿಕಿತ್ಸಾಲಯಗಳಿಗೆ ಬಂದು ನಿರಾಶ
ರಾಗಿ ಹಿಂತಿರುಗುವುದೆಂದರೆ ರುದ್ರಗತಿಯಲ್ಲದೆ ಮತ್ತೇನು?
ಜೊತೆಗೆ ಈ ಮಕ್ಕಳು ಅರಿವಿಲ್ಲದೆ ಮೂತ್ರ ಮಲವಿಸರ್ಜನೆ
ಮಾಡುವುದು ನೋಡುವ ಇತರರಿಗೆ ಅಸಹ್ಯವೆನಿಸುವುದು. ಒಂದು
ವೇಳೆ ಉಳಿದರೂ ವಿಧಿಯಿಲ್ಲದೆ ಅಜನ್ಮ ಕುರುಡನ್ನು ಅಪ್ಪ
ಬೇಕಾಗುವುದು. ಈ ಕುರುಡನ್ನು ಅಪ್ಪಿ ಬೆಳೆಯುತ್ತಿರುವ
ಮಕ್ಕಳು ಮನೆಯಲ್ಲೇ ಅಲ್ಲ ಸಮಾಜದಲ್ಲೂ ಕಠಿಣ ಸಮಸ್ಯೆಗಳಿಗೆ
ಎಡೆಗೊಟ್ಟಿವೆ.

ಕರಿಯ ಗುಡ್ಡೆಯು ಹೊಳಪು ಕುಂದಿ, ಬೆಳ್ಳಗಾಗಿ, ವ್ರಣವಾಗಿ
24 ಘಂಟೆಯೊಳಗಾಗಿ ತೂತಾಗಿ ಹಿಂಗಿಹೋಗುವುದು. 'ಎ'

ಜೀವಸತ್ವದ ಕೊರತೆಯು ಹೆಚ್ಚಾಗಿ ಬಡವರಲ್ಲಿ ಕಂಡುಬರು ವುಗು.

ಮಗುವಿನ ಆಹಾರದಲ್ಲಿ ಜೀವಸತ್ವ 'ಎ' ಯು ಅಧಿಕ ಪ್ರಮಾಣ ದಲ್ಲಿ ದೊರೆಯುವಂತಿರಬೇಕು. ಶೀಶೆ ಹಾಲಿನಿಂದ ಬೆಳೆದ ಮಕ್ಕಳಲ್ಲಿ ಹಿಂಗುಗಣ್ಣುಗಳ ಸಂಖ್ಯೆಯು ಹೆಚ್ಚಿನ ಪ್ರಮಾಣದಲ್ಲಿ ಕಂಡಿರು ತ್ತದೆ. ಎದೆ ಹಾಲಿನಿಂದ ಬೆಳೆದ ಮಕ್ಕಳಲ್ಲಿ ಹಿಂಗಣ್ಣುಗಳು ಅಪರೂಪ. ತಾಯಿ ಆಹಾರದಲ್ಲಿ ಜೀವಸತ್ವ 'ಎ' ಯು ಅಭಾ ವವು ಇದ್ದಲ್ಲಿ ಮಕ್ಕಳು ಹಿಂಗಣ್ಣುಗಳಿಗೆ ಬಲಿಬೀಳುವ ಸಂಭವ ಹೆಚ್ಚು. ಜೀರ್ಣಾಂಗಗಳ ರೋಗಗಳಲ್ಲಿ ಜೀವಸತ್ವ 'ಎ' ಯು ದೇಹವನ್ನು ಸೇರಲಾಗದೆ ಜೀವಸತ್ವ 'ಎ' ಯು ಅಭಾವದ ಪರಿ ಸ್ಥಿತಿಯು ತಲೆದೋರುವುದು. ಜೀವಸತ್ವ 'ಎ' ಅಭಾವವುಳ್ಳ ಮಕ್ಕಳಲ್ಲಿ ಜೀರ್ಣಾಂಗಗಳ ರೋಗಗಳು ಕಾಣಿಸಿಕೊಂಡು, ಜ್ವರ, ಭೇದಿಗಳು, ಆಮಶಂಕೆ ಪ್ರಾಪ್ತವಾಗುವುವು. ಜಂತುಹುಳು, ಕರುಳ ಹುಳುಗಳ ರೋಗಗಳು ಈ ಮಕ್ಕಳನ್ನು ಬಾಧಿಸುವುವು. ಅದ ರಿಂದ ಮಕ್ಕಳ ಆಮಶಂಕೆ ಮತ್ತು ಭೇಧಿಗಳಿಗೆ ಸರಿಯಾದ ಚಿಕಿತ್ಸೆ ನಡೆಸಬೇಕು. ಈ ಪರಿಸ್ಥಿತಿಗೆ ಜೀವಸತ್ವ 'ಎ' ಯು ಅಧಿಕ ಪ್ರಮಾಣದಲ್ಲಿ ಬೇಕಾಗುವುದು. ಯಕೃತ್ತಿನ ರೋಗಗಳು ಜೀವಸತ್ವ 'ಎ' ಯ ಅಭಾವದ ಪರಿಸ್ಥಿತಿಯನ್ನುಂಟುಮಾಡು ವುದು.

ಚಿಕಿತ್ಸೆ : ಜೀವಸತ್ವ 'ಎ' ಅಭಾವದಿಂದುಂಟಾಗುವ ಕುರುಡು ತಡೆಗಟ್ಟುವಂತಹುದು. ಕಾರಣ ಜೀವಸತ್ವ 'ಎ' ಯ ಅಭಾವ ವೆಂದು ನಿರ್ಧರವಾಗಿದೆ. ಮಗುವಿನ ಬೆಳವಣಿಗೆಯನ್ನು ಗಮನಿಸಿ

ಸಕಾಲದಲ್ಲಿ ಜೀವಸತ್ವ 'ಎ' ಯ ಅಭಾವವನ್ನು ಪತ್ತೆಹಚ್ಚಿ ಸರಿಯಾದ ಚಿಕಿತ್ಸೆ ನಡೆಸಿದಲ್ಲಿ ಕುರುಡಿಂದ ತಪ್ಪಿಸುವ ಸಾಧ್ಯತೆ ಇದೆ. ಕರಿಯ ಗುಡ್ಡೆಗೆ ರೋಗ ತಗಲಿದ ಮೇಲೆ ಚಿಕಿತ್ಸೆ ಕ್ಲಿಷ್ಟವಾಗುವುದಲ್ಲದೆ ಮೀರಿದ ಹಂತವು ಕುರುಡನ್ನು ತರುವುದು. ಅತಿ ಬೇಧಿಗಳಾಗುವುದರಿಂದಲೂ ಬ್ರಾಂಕೊನ್ಯುಮೋನಿಯಾದಿಂದಲೂ ಸಾವುಂಟಾಗುವುದು.

ಕಣ್ಣಿನ ಸಂಧಿಪರೆ ಒಣಗಿರುವ ಮತ್ತು ಬೆಳ್ಳಿ ಚುಕ್ಕಿಗಳು ಕಂಡ ಒಡನೆಯೇ ಕಾಡ್‌ಲಿವರ್ ಆಯಿಲ್‌ಅನ್ನು ತೊಟ್ಟುಗಳ ಮೂಲಕ ಕೊಡಬೇಕು. ಭೇಧಿಗಳಿದ್ದಲ್ಲಿ ಮತ್ತು ಕರಿಯ ಗುಡ್ಡೆಯು ಕಾಂತಿಹೀನವಾಗಿದ್ದಲ್ಲಿ ಜೀವಸತ್ವ 'ಎ' ಯನ್ನು ಚುಚ್ಚುಮದ್ದಿನ ಮೂಲಕ ದೇಹಕ್ಕೆ ಸೇರಿಸಬೇಕು. ನೇತ್ರ ವೈದ್ಯರ ಸಲಹೆಯನ್ನು ಕೂಡಲೇ ಪಡೆಯಬೇಕು. ಚರ್ಮಕ್ಕೆ ಕಾಡ್‌ಲಿವರ್ ಆಯಿಲ್ ಲೇಪಿಸಬೇಕು. ಅಲ್ಟ್ರವೈಯಲೆಟ್ ಕಿರಣಗಳ ಚಿಕಿತ್ಸೆಯು ಫಲಪ್ರದವಾಗಬಲ್ಲದು. ಕಣ್ಣುಗಳಿಗೆ ಕಾಡ್‌ಲಿವರ್ ಆಯಿಲ್ ತೊಟ್ಟುಗಳನ್ನು ಬಿಟ್ಟು ಪಟ್ಟಿ ಕಟ್ಟಬೇಕು. ಹಿಂಗುಗಣ್ಣು ಜೀವಸತ್ವ 'ಎ' ಯ ಅಭಾವದ ಅಂತಿಮಾವಸ್ಥೆಯಾಗಿರುವುದರಿಂದ ಗರ್ಭಿಣಿಯ ಸ್ಥಿತಿಯಿಂದಲೇ ಎಚ್ಚರವಹಿಸಿ ಚಿಕಿತ್ಸೆ ನಡೆಸುವುದು ಆವಶ್ಯಕ. ಕೂಲಿಕಾರರ ಆಹಾರದಲ್ಲಿ ಬದಲಾವಣೆ ಅಗತ್ಯ. ಅವರ ಆಹಾರದಲ್ಲಿ ಸಾಕಷ್ಟು ಹಾಲು ಬೆಣ್ಣೆ, ಲಿವರ್, ಹಸಿರು ಕ್ಯಾರಟ್, ಜಿಡ್ಡು ಪದಾರ್ಥಗಳು ದೊರಕುವಂತೆ ನೋಡಿಕೊಳ್ಳಬೇಕು. ಕಾಡ್ ಲಿವರ್ ಆಯಿಲ್ಲನ್ನಾಗಲೀ ಇಲ್ಲವೇ ಜೀವಸತ್ವ 'ಎ' ತೊಟ್ಟುಗಳನ್ನಾಗಲೀ ಗರ್ಭಿಣಿಯಿಂದ ಹಿಡಿದು ಹಾಲು ಕೊಡುವುದನ್ನು ನಿಲ್ಲಿಸುವವರೆಗೂ ಸೇವಿಸುತ್ತಿರಬೇಕು. ಸಾಕಷ್ಟು ತಾಯಿಯ ಹಾಲು ದೊರೆಯದಿದ್ದಲ್ಲಿ ಹಸುವಿನ ಹಾಲು ಕೊಡುವುದಲ್ಲದೆ

ಜೊತೆಗೆ ಜೀವಸತ್ವ 'ಎ' ಮತ್ತು 'ಡಿ' ತೊಟ್ಟುಗಳನ್ನು ಮಗು ವಿಗೆ ಹಾಕಬೇಕು.

ಜೀವಸತ್ವ 'ಬಿ' ಕಾಂಪ್ಲೆಕ್ಸ್

ಇದರಲ್ಲಿ ಜೀವಸತ್ವ ಬಿ ಮತ್ತು ಜೀವಸತ್ವ ಬಿ$_2$ ಮತ್ತು ಇತರ ಜೀವಸತ್ವಗಳು ಬೆರೆತಿರುವುದರಿಂದ ಇದನ್ನು ಜೀವಸತ್ವ ಬಿ ಕಾಂಪ್ಲೆಕ್ಸ್ ಎನ್ನುವರು. ಇದರ ಅಭಾವದಿಂದ ದೃಷ್ಟಿನರದ ಊತವು ಮತ್ತು ದೃಷ್ಟಿನರದ ಕ್ಷಯಿಕೆಯೂ ಮತ್ತು ಕರಿಯ ಗುಡ್ಡೆಯ ಊತವೂ ಮತ್ತು ಒಂದು ಬಗೆಯ ರಾತ್ರಿಯ ಕುರುಡೂ ಉಂಟಾಗುವುವು. ಶೇಕಡ ಮೂರರಷ್ಟು ಕುರುಡಿಗೆ ಈ ಜೀವ ಸತ್ವ ಕಾರಣವೆನ್ನುತ್ತಾರೆ. ಈ ಜೀವಸತ್ವದ ಅಭಾವವು ಕರಿಯ ಗುಡ್ಡೆಯನ್ನು ಸುಲಭವಾಗಿ ರೋಗಗಳಿಗೆ ಈಡುಮಾಡುತ್ತದೆ. ಕರಿಯ ಗುಡ್ಡೆಯ ಮೇಲೆ ವ್ರಣಗಳು ಕಾಣಿಸಿಕೊಂಡು ಕುರುಡಲ್ಲಿ ಕೊನೆಯಾಗುವುದು. ಮಾದಕ ದ್ರವ್ಯವನ್ನು ಸೇವಿಸುವವರಲ್ಲಿ ಅವರ ಜಠಕೋಶದ ಸೂಕ್ಷ್ಮಪರೆಯ ಆರೋಗ್ಯ ತಪ್ಪಿ ಕ್ಷೀಣಸ್ಥಿತಿ ಯಲ್ಲಿರುವುದರಿಂದ, ಈ ಜೀವಸತ್ವವು ಸರಿಯಾಗಿ ದೇಹಗತ ವಾಗದೆ ಈ ಜೀವಸತ್ವದ ಅಭಾವವುಂಟಾಗುವುದು. ಇದರ ಅಭಾವದಿಂದುಂಟಾಗುವ ದೃಷ್ಟಿನರದ ಊತಕ್ಕೆ ಕ್ಷಯಿಕೆಗೆ ಮತ್ತು ಕಣ್ಣಿನ ಚಲನವಲನಗಳಿಗೆ ಹೇತುವಾಗಿರುವ ಮಾಂಸ ಖಂಡಗಳ ದೋಷಗಳಿಗೆ, ಸೇವಿಸುತ್ತಿದ್ದ ಸಾರಾಯಿಯೇ ಕಾರಣವೆಂದು ಹಿಂದೆ ತಿಳಿದಿದ್ದರು. ಈಚೆಗೆ ನಡೆಸಿದ ಪರಿಶೋಧನೆ ಗಳಿಂದ ಈ ದೋಷಗಳಿಗೆ ಈ ಜೀವಸತ್ವ 'ಬಿ' ಕಾಂಪ್ಲೆಕ್ಸ್ ಕಾರಣವೆಂದು, ಇದನ್ನು ಚುಚ್ಚುಮದ್ದಿನ ಮೂಲಕ ಕೊಡು ವುದರಿಂದ ಈ ಬಗೆಯ ರೋಗಗಳು ಬಹಳ ಮಟ್ಟಿಗೆ ಉತ್ತಮಗೊಂಡಿರುವುದೆಂದು ತಿಳಿದುಬಂದಿರುತ್ತದೆ.

ಜೀವಸತ್ವಗಳ ಅಭಾವದಲ್ಲಿ ಈ ಜೀವಸತ್ವದ ಅಭಾವ ಹೆಚ್ಚು ಪ್ರಮಾಣದಲ್ಲಿ ಕಂಡುಬಂದಿದೆ ಎಂದು ಹೇಳುತ್ತಾರೆ. ಈ ಜೀವಸತ್ವದ ಅಭಾವದಿಂದ ಮುಖದ ಮೇಲೆ ಒಂದು ಬಗೆಯ ಚರ್ಮವ್ಯಾಧಿಯು ಮತ್ತು ಬಿಳಿಯ ಮತ್ತು ಕರಿಯ ಗುಡ್ಡೆಯ ರೋಗವುಂಟಾಗುತ್ತದೆ. ಕರಿಯ ಗುಡ್ಡೆಯ ಅಂಚಿನಿಂದ ಲೋಮನಾಳಗಳು ಪ್ರಸರಿಸಿ. ಕರಿಯ ಗುಡ್ಡಿನ ಪಾರದರ್ಶಕತ್ವವನ್ನು ಹೋಗಲಾಡಿಸುವುದಲ್ಲದೆ ಚುಕ್ಕಿಗಳಂತಹ ವ್ರಣಗಳನ್ನುಂಟು ಮಾಡುತ್ತವೆ. ಈ ಜೀವಸತ್ವವನ್ನು ಉಪಯೋಗಿಸುವುದರಿಂದ ಈ ರೋಗಗಳು ಉತ್ತಮಗೊಳ್ಳುವುವು.

ಜೀವಸತ್ವ 'ಸಿ'

ಇದು ಕಣ್ಣೊಳಗಿರುವ ಮಸೂರದ ಆರೋಗ್ಯಕ್ಕೆ ಅವಶ್ಯಕ. ಈ ಜೀವಸತ್ವವು ದೃಷ್ಟಿಪಟಲದ ಲೋಮನಾಳಗಳ ಮೃದುತ್ವದೊಂದಿಗೆ ಸಂಬಂಧ ಹೊಂದಿರುವುದರಿಂದ ಈ ಜೀವಸತ್ವದ ಅಭಾವದಿಂದ ದೃಷ್ಟಿಪಟಲದಲ್ಲಿ ರಕ್ತಸ್ರಾವವಾಗುತ್ತದೆ. ಮಕ್ಕಳಲ್ಲಿ ಕಣ್ಣುಗುಡ್ಡೆಯ ಹಿಂದುಗಡೆ ರಕ್ತಸ್ರಾವವಾಗಿ ರಕ್ತ ಹೆಪ್ಪುಗಟ್ಟಿ ಕಣ್ಣುಗುಡ್ಡೆಯು ಕಣ್ಣುಗೂಡಿನಿಂದ ಹೊರಕ್ಕೆ ದೂಡಿದಂತಿರುವುದು. ಹೀಗೆ ಆಗುವುದರಿಂದ ಕರಿಯ ಗುಡ್ಡೆಗೆ ರಕ್ಷಣೆ ತಪ್ಪಿ, ವ್ರಣವಾಗಿ ದೃಷ್ಟಿ ನಾಶವಾಗುವುದು.

# 9. ನಮಸ್ಕರ ಕುರುಡಿಗೆ ಕಾರಣಗಳು

ಕಣ್ಣಿಗೆ ಒದಗಬಹುದಾದ ಅಪಾಯುಗಳನ್ನು ಎರಡು ಭಾಗ ಗಳಾಗಿ ವಿಂಗಡಿಸಬಹುದು :

[1] ರೋಗಗಳಿಂದ ಒದಗುವ ಅಪಾಯುಗಳು.

[2] ಆಕಸ್ಮಿಕವಾಗಿ ಸಂಭವಿಸುವ ಅಪಾಯುಗಳು.

ಇವುಗಳಲ್ಲಿ [1] ದಾರಿಯಲ್ಲಿ ಹೋಗುತ್ತಿರುವಾಗ ಗಾಳಿಯಿಂದ ಕಣ್ಣಿಗೆ ಸಿಡಿಯುವ ಧೂಳು, ಮರಳಿನ ಹರಳು, ಕಂಬಳಿಹುಳುವಿನ ಕೂದಲು, ಇರುವೆ ರೆಪ್ಪೆಯ ಕೂವಲು, ಕೀಟಗಳ ರೆಕ್ಕೆ, ಇಲ್ಲವೆ ರೈಲಿನಲ್ಲಿ ಹೋಗುವಾಗ ಸಿಡಿಯುವ ಕಿಡಿ, ಕಲ್ಲಿದ್ದಲಿನ ರವೆ, ಕೊಡೆಯಕಡ್ಡಿ ಇತ್ಯಾದಿ–ಇವುಗಳಿಂದ ಕಣ್ಣಿಗೆ ಆಗುವ ಅಪಾಯ ಗಳು.

[2] ಹುಡುಗರು ಆಡುವಾಗ ಚಿನ್ನಿಕೋಲು. ಬಿಲ್ಲಿನ ಆಟ, ಪಟಾಕಿಯ ಹಬ್ಬದಲ್ಲಿ ಸುಡುವ ಬಾಣಬಿರುಸು ಪಟಾಕಿಗಳಿಂದಾ ಗುವ ತೊಂದರೆ. ಚೂಪಾದ ಆಟದ ವಸ್ತುಗಳನ್ನು ಬಳಸುವುದು ಇತ್ಯಾದಿ. ಇವುಗಳ ವಿಚಾರವಾಗಿ ಹಿಂದೆಯೇ ತಿಳಿಸಿದೆ.

[3] ಬೆಂಕಿ ಮತ್ತು ದ್ರಾವಕಗಳಿಂದ ಒದಗಬಹುದಾದ ಅಪ ಘಾತಗಳು.

[4] ಔದ್ಯೋಗಿಕ ವೃತ್ತಿಗಳಿಗೆ ಸಂಬಂಧಿಸಿದ ಅಪಾಯುಗಳು. ಕಣ್ಣುಗುಡ್ಡೆಯು ಮೂಳೆಯ ಗೂಡಿನಲ್ಲಿ ಸುರಕ್ಷಿತವಾಗಿ ಇಡ

ಲ್ಪಟ್ಟಿದ್ದರೂ, ರಕ್ಷಣೆಕೊಡುವ ರೆಪ್ಪೆಗಳಿದ್ದರೂ, ಕಣ್ಣು ಗುಡ್ಡೆಗೆ ಪೆಟ್ಟು ಬೀಳದಂತೆ ರೆಪ್ಪೆಗಳು ಮುಚ್ಚುವಂತಿದ್ದರೂ ಕೂಡ ಕಣ್ಣು ಗುಡ್ಡೆಗಳು ಅಪಾಯಗಳಿಂದ ದೂರವಾಗಿಲ್ಲ.

1. ಕರಿಯ ಕಣ್ಣು

ಕಣ್ಣಿನ ಸುತ್ತ ಮೂಕಪೆಟ್ಟಿನ ಫಲವಾಗಿ ರೆಪ್ಪೆಯ ಒಳಗೆ ಮತ್ತು ಸುತ್ತ ರಕ್ತಸ್ರಾವವಾಗಿ ರಕ್ತ ಹೆಪ್ಪುಗಟ್ಟಿ ಕಣ್ಣಿನ ಸುತ್ತ ನೀಲಿಬಣ್ಣ ಕಾಣಿಸಿಕೊಳ್ಳುವುದು. ರಕ್ತವು ಕೆಲವು ದಿನಗಳಲ್ಲಿ ಇಮರುವುದು. ಪೆಟ್ಟುಬಿದ್ದ ತಕ್ಷಣ ತಣ್ಣೀರಿನ ಬಟ್ಟೆಯನ್ನು ಹಾಕಬೇಕು. ನೇತ್ರ ವೈದ್ಯರ ಸಲಹೆ ಅಗತ್ಯ. ನೋಡಲು ಸ್ಥಿತಿಯು ತೀವ್ರವಲ್ಲದಿದ್ದರೂ ಕಣ್ಣೊಳಗೆ ತೀವ್ರ ಪೆಟ್ಟಾಗಿರಬಹುದು.

2. ರೆಪ್ಪೆಗಳ ಸುಟ್ಟಗಾಯಗಳು

ಬೆಂಕಿ, ದ್ರಾವಕಗಳು ಇಲ್ಲವೆ ಕ್ಷಕಿರಣಗಳು ರೆಪ್ಪೆಗಳ ವಿಕಾರಕ್ಕೂ, ವಕ್ರತೆಗೂ ಕಾರಣವಾಗಿರುತ್ತವೆ. ರೆಪ್ಪೆಗಳು ಚಿಕ್ಕವಾಗಿ ಕಣ್ಣು ಗುಡ್ಡೆಯನ್ನು ಮುಚ್ಚಲಾಗದೆ ಕರಿಯ ಗುಡ್ಡೆಯ ಮೇಲೆ ವ್ರಣಗಳಾಗಿ ದೃಷ್ಟಿ ನಾಶವಾಗುವುದುಂಟು. ಆದರಿಂದ ಸಕಾಲದಲ್ಲಿ ಇವುಗಳಿಗೆ ಚಿಕಿತ್ಸೆ ಅವಶ್ಯಕ.

3. ಸುಣ್ಣ ಸಿಡಿದ ಕಣ್ಣಿನ ಗಾಯಗಳು

ಸುಣ್ಣ ಬಳಿಯುವಾಗ, ಸುಣ್ಣ ಕುದಿಸುವಾಗ ಸುಣ್ಣದ ನೀರು ಇಲ್ಲವೆ ಸುಣ್ಣದ.ಹೊಗೆ ಕಣ್ಣಿಗೆ ಸಿಡಿದು, ಸಂಧಿಪರೆಯ ಮೇಲೂ, ಕರಿಯ ಗುಡ್ಡೆಯ ಮೇಲೂ ಸುಟ್ಟಗಾಯಗಳಾಗುವುದುಂಟು. ಕರಿಯ ಗುಡ್ಡೆಯ ಮೇಲಿನ ಹೊರಪದರಗಳು ಸುಲಿದು, ಪಾರ

ದರ್ಶಕತೆಯು ನಾಶವಾಗಿ ಬೆಳ್ಳಗಾಗುವುದು. ವೈದ್ಯರನ್ನು ನೋಡುವ ಮೊದಲೇ ಸರ್ವನಾಶವಾಗಿರಬಹುದು. ಅದರಿಂದ ಸುಣ್ಣ ಕಣ್ಣಿಗೆ ಬಿದ್ದ ಒಡನೆಯೇ ಕಣ್ಣನ್ನು ನೀರಿಂದ ತೊಳೆಯಬೇಕು. ಕಣ್ಣಲ್ಲಿ ಬಿದ್ದಿರುವ ಸುಣ್ಣದ ರವೆಗಳನ್ನು ಕರವಸ್ತ್ರದಿಂದ ಒರೆಸಿ ತೆಗೆಯಬೇಕು. ಕೂಡಲೇ ನೇತ್ರವೈದ್ಯರನ್ನು ಕಂಡು ಚಿಕಿತ್ಸೆ ಪಡೆಯಬೇಕು.

## 4. ಹೊರ ಪದಾರ್ಥಗಳು

ಕಾದ ಲೋಹದ ಚೂರು, ರಸಾಯನಿಕ ವಸ್ತುಗಳ ಕಣಗಳು. ಮತ್ತು ಇತರ ವಿಧವಾದ ಲೋಹದ ಚೂರುಗಳು, ಕಲ್ಲಿದ್ದಲಿನ ರವೆ, ಧೂಳು ಮುಂತಾದವು ಕಣ್ಣಿಗೆ ಸಿಡಿದು ಅಪಾಯವನ್ನುಂಟು ಮಾಡಬಹುದು. ಉದಾಸೀನ ಮಾಡಿದಲ್ಲಿ ದೃಷ್ಟಿ ನಾಶವಾಗುವ ಸಂಭವವುಂಟು. ಈ ಹೊರ ಪದಾರ್ಥಗಳು ಕರಿಯ ಗುಡ್ಡೆಯ ಮೇಲೆ ರಾಚಿ ವ್ರಣಗಳನ್ನುಂಟುಮಾಡಬಲ್ಲದು. ಹೊರ ಪದಾರ್ಥ ಕಣ್ಣೊಳಕ್ಕೆ ಬಿದ್ದಾಗ ಕಣ್ಣಿನಲ್ಲಿ ಒಂದು ಬಗೆಯ ಅಸಮಾಧಾನ. ಉರಿ, ನೀರು ಸುರಿಯುವುದು ಕಾಣಿಸಿಕೊಳ್ಳುವುದು. ಈ ಹೊರ ಪದಾರ್ಥವನ್ನು ಹತ್ತಿರವಿದ್ದವರು ಕರುಣೆಯಿಂದ ಕೊಳೆ ಕೈ ಮತ್ತು ಕೊಳೆ ಬಟ್ಟೆಯಿಂದ ತೆಗೆಯಲು ಮುಂದೆ ಬರುವುದುಂಟು. ಅದರಿಂದ ಕೊಳೆಯು ಕಣ್ಣನ್ನು ಸೇರಿ ಹೆಚ್ಚಿನ ಅಪಾಯವಾಗುವುದುಂಟು. ಇದರಿಂದ ಆಗುವ ಅಪಾಯವನ್ನು ತೆಗೆಯುವವನೂ ಮತ್ತು ತೆಗೆಸಿಕೊಳ್ಳುವವನೂ ತಿಳಿದಿರಬೇಕು. ಕೂಡಲೇ ನೇತ್ರ ವೈದ್ಯರನ್ನು ಕಂಡು ಚಿಕಿತ್ಸೆ ಪಡೆಯಬೇಕು.

ಕರಿಯ ಗುಡ್ಡೆಯ ಮೇಲೆ ಹೊರ ಪದಾರ್ಥವು ನೆಲೆಸಿದಲ್ಲಿ ತಡೆಯಲಾಗದ ಕುಕ್ಕುನೋವು ಕಾಣಿಸಿಕೊಳ್ಳುವುದು. ಹೊರ

ಪದಾರ್ಥದ ಸುತ್ತ ಬಿಳುಪು ಕಾಣಿಸಿಕೊಳ್ಳುವುದು. ಹೊರ ಪದಾರ್ಥ ತೆಗೆದ ನಂತರ ಉಳಿದ ಕಲೆಯಿಂದ ದೃಷ್ಟಿಮಾಂದ್ಯ ಬರಬಹುದು. ಇಲ್ಲವೆ ಕರಿಯ ಗುಡ್ಡೆಯ ಮೇಲೆ ವ್ರಣವಾಗಿ ಕೀತು ದೃಷ್ಟಿ ನಾಶವಾಗಬಹುದು. ಅದರಿಂದ ಹೊರಪದಾರ್ಥವೆಂದು ನಿರ್ಲಕ್ಷಿಸದೆ ಕೂಡಲೇ ನೇತ್ರ ಚಿಕಿತ್ಸಕರಿಂದ ಚಿಕಿತ್ಸೆ ಹೊಂದಬೇಕು. ಕಣ್ಣಿಗೆ ಒದಗಬಹುದಾದ ಈ ವಿಧವಾದ ಅಪಾಯಗಳಲ್ಲಿ ಶೇಕಡ 80ರಷ್ಟು ಹಾರುವ ರವೆಗಳಿಂದುಂಟಾಗುತ್ತದೆ. ಕಣ್ಣಿನ ಅಪಾಯದ ತೀಕ್ಷ್ಣತೆಯು ಸಿಡಿಯುವ ರವೆಯ ಆಕಾರ, ಗಾತ್ರ ಮತ್ತು ವೇಗವನ್ನು ಅವಲಂಬಿಸಿರುತ್ತದೆ. ಹೆಚ್ಚು ವೇಗದಿಂದ ಸಿಡಿದಲ್ಲಿ ಕಣ್ಣಿನ ಪದರಗಳನ್ನು ಕೊರೆದು ಕಣ್ಣೊಳಕ್ಕೆ ಹೊಕ್ಕು ನೆಲಸಿ ದೃಷ್ಟಿ ನಾಶವನ್ನುಂಟುಮಾಡಬಹುದು. ಕಣ್ಣೊಳಕ್ಕೆ ಹೋಗುವಾಗ ದೃಷ್ಟಿಗೆ ಸಂಬಂಧಿಸಿದ ಅಂಗಗಳಿಗೆ ಹಾನಿಯಾಗಬಹುದು. ಹೊರ ಪದಾರ್ಥವು ವಿಷಾಣುಗಳಿಂದ ಸುತ್ತುವರಿದಿದ್ದರೆ ಕಣ್ಣೊಳಕ್ಕೆ ಕೀವು ಸೇರಿ, ಬಿರಿದು ಕಣ್ಣು ಹಾಳಾಗುವುದು ಇಲ್ಲವೆ ಕಣ್ಣೊಳಗೇ ನೆಲಸಿ, ಉದ್ರೇಕವನ್ನುಂಟುಮಾಡಿ ಕ್ರಮೇಣ ದೃಷ್ಟಿನಾಶವನ್ನುಂಟುಮಾಡಬಹುದು.

ಗಾಜಿನ ಚೂರು, ಸೀಸ, ಚಿನ್ನ, ಬೆಳ್ಳಿ, ಅಲ್ಯೂಮಿನಿಯಂ ಲೋಹಗಳ ಚೂರುಗಳು ಹಾನಿಯನ್ನುಂಟುಮಾಡದೆ. ಕಣ್ಣಿಗೆ ಯಾವ ತೊಂದರೆಯನ್ನು ಮಾಡದೆ ಹಲವಾರು ವರ್ಷಗಳವರೆಗೆ ಕಣ್ಣೊಳಗೆಯೇ ನೆಲಸಿರಬಹುದು. ಕಬ್ಬಿಣ, ಉಕ್ಕು, ತಾಮ್ರ, ಮತ್ತು ಮರದ ಚೂರುಗಳು ಕಣ್ಣೊಳಗೆ ನೆಲಸಿ ರಸಾಯನಿಕ ಕ್ರಿಯೆಯನ್ನುಂಟುಮಾಡಿ ಪೂರ್ಣದೃಷ್ಟಿ ನಾಶವನ್ನುಂಟುಮಾಡುವವು. ಈ ಬಗೆಯ ಅಪಾಯಗಳಿಗೆ ಒಳಗಾದ ಕಲಸಗಾರರು ಕೂಡಲೇ ನೇತ್ರವೈದ್ಯರ ಬಳಿಗೆ ಬಾರದೆ ಇರುವುದರಿಂದಲೂ ಮತ್ತು ಉದಾಸೀನತೆಯಿಂದ ಹೆಚ್ಚು ದಿನಗಳನ್ನು ಕಳೆದು ಬರುವುದ

ರಿಂದಲೂ ಕಣ್ಣಿನ ಸಣ್ಣಗಾಯವು ವಿಷಕ್ರಿಮಿಗಳಿಂದಾವೃತವಾಗಿ ಉಲ್ಬಣಿಸಿ, ದೊಡ್ಡ ವ್ರಣವಾಗಿ ಕೊನೆಗೆ ಅಂಧತ್ವದಲ್ಲಿ ಕೊನೆಗಾಣುವುದು.

ಬತ್ತದ ಗದ್ದೆ ಮತ್ತು ಹೊಲದ ಕೊಯ್ಲು ಕಾಲದಲ್ಲಿ ರಾಗಿಯು ಮತ್ತು ಬತ್ತದ ತೆನೆಗಳು ರೈತನ ಕಣ್ಣಿಗೆ ತಗುಲಿ, ಸಮಯದಲ್ಲಿ ಚಿಕಿತ್ಸೆಯನ್ನು ಹೊಂದದೆ ಎಷ್ಟೋ ಜನ ರೈತರು ಕಣ್ಣುಗಳನ್ನು ಕಳೆದುಕೊಂಡಿರುವರು. ಹಲವರು ಅಪಾಯ ಒದಗಿದ 7–8 ದಿನಗಳಾದ ಮೇಲೆ ಕರಿಯ ಗುಡ್ಡೆಯ ಮೇಲೆ ಹೂವು ಬಂದು ದೃಷ್ಟಿಯು ಹಿಂಗಿದ ಮೇಲೆ ವೈದ್ಯರಲ್ಲಿಗೆ ಬರುವುದುಂಟು. ಕೆಲವರು ನಾಡವೈದ್ಯರ ಔಷದಿಗಳನ್ನು ಉರಿ ಅಂಜನಗಳನ್ನು ಕಣ್ಣಿಗೆ ಹಚ್ಚಿ ದೃಷ್ಟಿಯನ್ನು ಕಳೆದುಕೊಳ್ಳುವುದುಂಟು. ದನಗಳನ್ನು ಹೊಡೆಯುವ ಚಾವಟಿಯಿಂದಲೂ, ಮರಗಳ ದಿಮ್ಮಿಗಳನ್ನು ಕಡೆಯುವಾಗಲೂ, ಕೊಂಬೆಗಳನ್ನು ಕತ್ತರಿಸುವಾಗಲೂ. ಬಂಡಿಗಳಿಗೆ ಧಾನ್ಯವನ್ನು ತುಂಬುವಾಗಲೂ. ತೆನೆಗಳನ್ನು ಹೊಡೆಯುವಾಗಲೂ ರೈತರು ಅಪಾಯಗಳಿಗೆ ಗುರಿಯಾಗುವರು. ಆದುದರಿಂದ ರೈತರು ಈ ಬಗೆಯ ಅಪಾಯವು ಕಣ್ಣಿಗೆ ಒದಗಿದೊಡನೆಯೇ ಹೆಚ್ಚು ಕಾಲ ಕಳೆಯದೆ ತಕ್ಷಣವೇ ಸರಿಯಾದ ನೇತ್ರವೈದ್ಯರಲ್ಲಿ ಚಿಕಿತ್ಸೆಯನ್ನು ಹೊಂದಬೇಕು. ಕಣ್ಣಿಲ್ಲದ ಮೇಲೆ ವ್ಯವಸಾಯವನ್ನು ಹೇಗೆ ತಾನೆ ಮಾಡಲಾದೀತು?

ಕಲ್ಲುಕುಟುಕರು ಕಲ್ಲನ್ನು ಕುಟ್ಟುವಾಗ ಉಳಿಯ ಚೂರುಗಳು ಕಣ್ಣಲ್ಲಿ ಹೋಗುವ ಸಂಭವವುಂಟು. ಕಲ್ಲು ಚೂರುಗಳು. ಸುತ್ತಿಗೆಯಿಂದ ಹೊರಬಿದ್ದ ಕಬ್ಬಿಣದ ಚೂರುಗಳು ಕಣ್ಣನ್ನು ಹೊಕ್ಕು ದೃಷ್ಟಿನಾಶವನ್ನುಂಟುಮಾಡಬಲ್ಲದು.

ನಿವಾರಣೆ: [1] ಕಲ್ಲುಕುಟುಕರು ಕಲ್ಲು ಕುಟ್ಟುವಾಗ ರಕ್ಷಣಾ ಕನ್ನಡಕಗಳನ್ನು ಹಾಕಿಕೊಳ್ಳಬೇಕು.

(2) ಮೋಟಾರ್ ಸೈಕಲ್ ವಾಹಕರು ರಕ್ಷಣಾ ಗಾಜುಗಳನ್ನು ಹಾಕಿಕೊಳ್ಳಬೇಕು.

(3) ಹೊರ ಪದಾರ್ಥ ಕಣ್ಣಿಗೆ ಬಿದ್ದಲ್ಲಿ ಕಣ್ಣನ್ನು ಉಜ್ಜ ಬಾರದು.

(4) ಕಣ್ಣನ್ನು ಮಿಟುಕಿಸುವಾಗ ಹೊರ ಪದಾರ್ಥವು ಕಣ್ಣಿ ರಿಂದ ಹೊರಬರಬಹುದು.

(5) ಹಾಗೆ ಬಾರದಿದ್ದಲ್ಲಿ ನೀರಿನಲ್ಲಿ ಕಣ್ಣನ್ನು ಅದ್ದಿ ಪದೇ ಪದೇ ಕಣ್ಣು ಮಿಟಿಕಿಸಬೇಕು.

(6) ಇದರಿಂದ ಉತ್ತಮವಾಗದಿದ್ದಲ್ಲಿ, ಕೂಡಲೇ ನೇತ್ರ ಚಿಕಿತ್ಸಕರನ್ನು ಕಂಡು ಸಲಹೆ ಪಡೆಯಿರಿ. ಹತ್ತಿರವಿದ್ದವರಿಂದ ಕಣ್ಣಲ್ಲಿ ಬಿದ್ದ ಪದಾರ್ಥಗಳನ್ನು ತೆಗೆಸಲು ಒಪ್ಪಬೇಡಿರಿ.

5. ಕಾರ್ಖಾನೆಗಳಲ್ಲಿ ಆಗುವ ಅಪಘಾತಗಳು

ಎಲ್ಲರೂ ತಕ್ಕಮಟ್ಟಿಗೆ ಓದುಬರಹವನ್ನು ಮತ್ತು ಸಾಮಾನ್ಯ ತಿಳುವಳಿಕೆಯನ್ನು ಪಡೆದಿರುವ ನಾಗರಿಕ ಪಾಶ್ಚಿಮಾತ್ಯ ದೇಶ ಗಳಲ್ಲೂ ಕೂಡ ವರ್ಕ್‌ಷಾಪ್ ಮತ್ತು ಫ್ಯಾಕ್ಟರಿಗಳಲ್ಲಿ ಕೆಲಸ ಮಾಡುವಾಗ ಕಣ್ಣಿಗೆ ಒದಗುವ ಅಪಾಯಗಳನ್ನು ತಪ್ಪಿಸಿಕೊಳ್ಳುವ ವಿಚಾರದಲ್ಲಿ ತಿಳುವಳಿಕೆಯನ್ನು ಮತ್ತು ಮುಂಜಾಗ್ರತೆ ಕ್ರಮ ಗಳನ್ನು ಅವಷ್ಟುಮಟ್ಟಿಗೆ ಅನುಸರಿಸುತ್ತಿದ್ದರೂ ಈ ಬಗೆಯ ಅಪಾಯಗಳನ್ನು ತಡೆಗಟ್ಟುವುದು ಇದಕ್ಕೆ ಸಂಬಂಧಪಟ್ಟ ಅಧಿ ಕಾರಿಗಳಿಗೆ ಒಂದು ದೊಡ್ಡ ಸಮಸ್ಯೆಯೇ ಆಗಿರುತ್ತದೆ. ನಮ್ಮ ದೇಶದ ಕಾರ್ಖಾನೆಗಳಲ್ಲಿ ಬಹುಮಂದಿ ಅವಿದ್ಯಾವಂತರಾಗಿರು

ತ್ತಾರೆ. ಈ ರಕ್ಷಣಾ ವಿಷಯುಗಳಲ್ಲಿ ಸಾಮಾನ್ಯವಾದ ತಿಳುವಳಿಕೆ ಯನ್ನು ಕೂಡ ಅವರು ಹೊಂದಿಲ್ಲ. ಹೀಗಿರುವಲ್ಲಿ ಕಣ್ಣಿಗೆ ಈ ಬಗೆಯ ಅಪಾಯುಗಳು ನಮ್ಮ ದೇಶದಲ್ಲಿ ಹೆಚ್ಚೆಂದು ಬೇರೆ ಹೇಳ ಬೇಕಾಗಿಲ್ಲ. ಈ ಬಗ್ಗೆ ಸರಿಯಾದ ಅಂಕಿಅಂಶಗಳು ದೊರೆತಿಲ್ಲ. ಅಮೆರಿಕೆಯ ಸಂಯುಕ್ತ ಸಂಸ್ಥಾನದಲ್ಲಿ ರೆಶ್‌ನಿಕ್‌ರ ವರದಿಯಂತೆ ಪ್ರತಿ ವರ್ಷವೂ ಕಾರ್ಖಾನೆಯ ಅಪಘಾತಗಳಿಂದ 110,000,000 ಡಾಲರ್‌ಗಳಷ್ಟು ನಷ್ಟವೆಂದು ತಿಳಿದುಬಂದಿದೆ. ಕೂಲಿಕಾರರ ಮನೆಯವರಿಗೆ ಕೊಡುವ ಪರಿಹಾರ ಮತ್ತು ಅಪ ಘಾತಗಳಲ್ಲಿ ಕುರುಡು ಆದವರಿಗೆ ಕೊಡುವ ಪರಿಹಾರವನ್ನು ಗಣನೆಗೆ ತೆಗೆದುಕೊಂಡಲ್ಲಿ 100,000.000 ಡಾಲರ್‌ಗಳಷ್ಟು ಪ್ರತಿವರ್ಷ ಹೆಚ್ಚು ಖರ್ಚಾಗುವುದೆಂದು ತಿಳಿದುಬಂದಿದೆ. ಬ್ರಿಟನ್ ನಲ್ಲಿ ಕಾರ್ಖಾನೆಗಳಲ್ಲಿ ಕಣ್ಣಿಗೆ ಆಗುವ ಅಪಘಾತಗಳು ಪ್ರತಿ ವರ್ಷವು 200,000 ಅಂಕಿ ಮುಟ್ಟುವುದೆಂದು ತಿಳಿದುಬಂದಿದೆ. ಇತ್ತೀಚೆಗೆ ನಮ್ಮ ಸರಕಾರವು ಹೆಚ್ಚು ಹೆಚ್ಚು ಆಧುನಿಕ ಕಾರ್ಖಾನೆ ಗಳನ್ನು, ಕೈಗಾರಿಕೆ ಸಂಸ್ಥೆಗಳನ್ನು ನಿರ್ಮಿಸುವ ಕಾರ್ಯದಲ್ಲಿ ಕೈಹಚ್ಚತೊಡಗಿದೆ. ಹೆಚ್ಚು ಹೆಚ್ಚು ಮಂದಿ ಕೆಲಸಗಾರರು ಈ ಫ್ಯಾಕ್ಟರಿಗಳಲ್ಲಿ ಕೆಲಸ ಮಾಡಬೇಕಾಗಿರುವುದರಿಂದ ಈ ರಕ್ಷಣಾ ವ್ಯವಸ್ಥೆಯಲ್ಲಿ ಸಾಮಾನ್ಯ ಜನರ ತಿಳುವಳಿಕೆಯನ್ನು ಹೆಚ್ಚಿಸ ಬೇಕಾದುದು ಅತ್ಯಾವಶ್ಯಕವಾಗಿದೆ.

ಇಂಗ್ಲೆಂಡಿನಲ್ಲಿರುವ ವರ್ಕ್‌ಶಾಪ್ ಮತ್ತು ಫ್ಯಾಕ್ಟರಿಗಳಲ್ಲಿ ಕಣ್ಣಿನಲ್ಲಿ ಬೀಳುವ ಹೊರವಸ್ತುಗಳನ್ನು ತೆಗೆಯಲು ಸುಶಿಕ್ಷಿತ ರಾದ ನರ್ಸ್‌ಗಳಿರುತ್ತಾರೆ. ಪಕ್ಕದಲ್ಲಿರುವ ಕೆಲಸಗಾರನು ಕಣ್ಣಿನಲ್ಲಿ ಬೀಳುವ ಕೊಳೆಯನ್ನು ತೆಗೆಯಬೇಕಾದ ಪ್ರಸಂಗವೇ ಇರುವು ದಿಲ್ಲ. ಅಮೆರಿಕಾ ದೇಶದ ಫ್ಯಾಕ್ಟರಿಗಳಲ್ಲಿ ಕೆಲಸಮಾಡುವ ಪ್ರತಿ ಯೊಬ್ಬ ಕೆಲಸಗಾರನು ರಕ್ಷಣಾ ಕನ್ನಡಕಗಳನ್ನು ಹಾಕಿಕೊಂಡು

ಕೆಲಸಮಾಡುವಷ್ಟರ ಮಟ್ಟಿಗೆ ಪ್ರಚಾರಮಾಡಿ ಜಯಶೀಲರಾಗಿ ರುತ್ತಾರೆ. ಅಲ್ಲದೆ ಈ ಬಗೆಯ ಅಪಾಯಕ್ಕವಕಾಶವಿರುವ ಇಲಾಖೆ ಯನ್ನು ಬೇರ್ಪಡಿಸಿ, ಅಲ್ಲಿ ಕೆಲಸಮಾಡುವ ಪ್ರತಿಯೊಬ್ಬನೂ ರಕ್ಷಣಾ ಕನ್ನಡಕವನ್ನು ಹಾಕಿಕೊಳ್ಳಬೇಕೆನ್ನುವ ನಿಯಮವನ್ನು ಜಾರಿಗೆ ತಂದಿರುತ್ತಾರೆ. ಈ ಇಲಾಖೆಯನ್ನು ನೋಡಲು ಒಮ್ಮೊಮ್ಮೆ ಬರುವವರೂ ಕೂಡ ರಕ್ಷಣಾ ಕನ್ನಡಕಗಳನ್ನು ಹಾಕಿಕೊಂಡೇ ಪ್ರವೇಶಿಸಬೇಕು. ಈ ರಕ್ಷಣಾ ವ್ಯವಸ್ಥೆಯಲ್ಲಿ ಕೆಲಸಗಾರನು ತನ್ನ ಸೌಕರ್ಯಕ್ಕಾಗಿ ಪೂರ್ಣ ಸಮ್ಮತಿಯನ್ನು ಕೊಟ್ಟು ನಡೆಸಿಕೊಳ್ಳು ವಂತೆ ಆ ದೇಶದವರು ಮಾಡಿರುವುದು ಸ್ತುತ್ಯವೇ ಸರಿ. ಕೆಲಸ ಗಾರನು ತನಗಿರುವ ಅಪಾಯವನ್ನು ಅರ್ಥಮಾಡಿಕೊಂಡು ತನ್ನ ಸೌಕರ್ಯವನ್ನು ತಾನೇ ನೋಡಿಕೊಳ್ಳುವಂತಾಗುವವರೆಗೂ ಯಾವ ಬಗೆಯ ರಕ್ಷಣಾ ಏರ್ಪಾಟುಗಳೂ ಅಷ್ಟು ಪ್ರಯೋಜನ ಕಾರಿಯಾಗುವಂತಿಲ್ಲ.

ಈ ರಕ್ಷಣಾ ಕನ್ನಡಕಗಳನ್ನು ಕೆಲಸಮಾಡುವಷ್ಟು ಹೊತ್ತು ಹಾಕಿಕೊಳ್ಳಬೇಕಾಗಿರುವುದರಿಂದ ಇವುಗಳು ಕಣ್ಣಿಗೆ ಸರಿಯಾಗಿ ಹೊಂದುವಂತೆಯೂ, ಹಗುರವಾಗಿಯೂ, ಸುಖಕರವಾಗಿಯೂ ಕೊಳಕಾಗದಂತೆಯೂ ಇರಬೇಕು. ಅಮೆರಿಕಾ ದೇಶದಲ್ಲಿ 2500 ಕ್ಕಿಂತ ಹೆಚ್ಚು ಕೆಲಸಗಾರರಿರುವ ಫ್ಯಾಕ್ಟರಿಗಳಲ್ಲಿ ಈ ಬಗೆಯ ರಕ್ಷಣಾ ಕನ್ನಡಕಗಳ ರಿಪೇರಿ ಮತ್ತು ಉಸ್ತುವಾರಿಗೂ ಒಬ್ಬ 'ಸರ್ವಿಸ್‌ಮನ್' ಇರುತ್ತಾನೆ. ಆತನು ಕೂಡಲೇ ರಕ್ಷಣಾ ಕನ್ನಡಕ ವನ್ನು ಸರಿಮಾಡಿಕೊಡುವುದರಿಂದ ಕೆಲಸಗಾರನು ತಾನಿರುವ ಸ್ಥಳವನ್ನು ಬಿಡಬೇಕಾಗಿಲ್ಲ. ಅಲ್ಲದೆ ಕನ್ನಡಕಗಳನ್ನು ಶುಚಿ ಮಾಡುವ ವ್ಯವಸ್ಥೆಯೂ ಉಂಟು.

ಫ್ಯಾಕ್ಟರಿಯಲ್ಲಿ ಕಣ್ಣಿಗೆ ಒದಗಬಹುದಾದ ಅಪಾಯಗಳು ಯಾವುವೆಂದರೆ :

[1] ರೆಪ್ಪೆಗಳು ಅಪಾಯಕ್ಕೊಳಗಾಗಿ ತೂತು ಬೀಳುವುದು ಮತ್ತು ಹರಿದು ಹೋಗುವುದು.

[2] ಕಣ್ಣುಗುಡ್ಡೆಗಳಿಗೆ ಚೂಪಾದ ಪದಾರ್ಥಗಳು ಚುಚ್ಚಿ ಗಾಯಗೊಳಿಸುವುದು.

[3] ಕಣ್ಣೊಳಕ್ಕೆ ಹೊಕ್ಕು ನೆಲಸುವ ಹೊರ ವಸ್ತುಗಳು.

[4] ಕಣ್ಣು ಮತ್ತು ಅದರ ಸುತ್ತಲಿರುವ ಅಂಗಗಳಿಗೆ ರಾಸಾಯಿನಿಕ ದ್ರವಗಳಿಂದಾಗುವ ಸುಟ್ಟ ಗಾಯಗಳು.

[5] ಕಣ್ಣಿನ ಚಲನವಲನಗಳ ವ್ಯತ್ಯಾಸದಿಂದ ಉಂಟಾಗುವ ದ್ವಿದೃಷ್ಟಿ.

[6] ವಿಷಕ್ರಿಮಿಗಳು ವೃದ್ಧಿಯಾಗಿ ವ್ರಣವಾಗಿ ಕೊನೆಗೆ ದೃಷ್ಟಿಯ ಪೂರ್ಣನಾಶ.

ಕಣ್ಣೊಳಗೆ ಬಿದ್ದಿರುವ ಹೊರ ವಸ್ತುಗಳನ್ನು ಪೂರ್ಣವಾಗಿ ತೆಗೆದರೂ ಕಣ್ಣಿನ ಆಂತರಿಕ ರಚನೆಯು ವ್ಯತ್ಯಾಸವನ್ನು ಹೊಂದುವುದರಿಂದ ದೃಷ್ಟಿಯು ಬಹುಮಟ್ಟಿಗೆ ಕಡಿಮೆಯಾಗುವುದು. ತೊಂದರೆಗೀಡಾದವರಲ್ಲಿ ಶೇಕಡ 40ರಷ್ಟು ಮಂದಿ ಉಪಯುಕ್ತವಾದ ದೃಷ್ಟಿಯನ್ನು ತೊಂದರೆಗೀಡಾದ ಕಣ್ಣಿಂದ ಕಳೆದುಕೊಂಡಿರುವರು. ಎರಡು ಕಣ್ಣುಗಳ ಏಕದೃಷ್ಟಿಯನ್ನು ಕಳೆದುಕೊಂಡಿರುವವರ ಸಂಖ್ಯೆಯು ಇನ್ನೂ ಹೆಚ್ಚು.

### 6. ಕಣ್ಣು ಉರಿಗೆ ಕಾರಣವಾದ ಧೂಮಗಳು ಮತ್ತು ಧೂಳು

ಕಣ್ಣು ಉರಿಯನ್ನುಂಟುಮಾಡುವ ಹೊಗೆ ಕಣ್ಣಿಗೆ ಸೋಂಕಿ ಕರಿಯ ಗುಡ್ಡೆಯ ಮೇಲೆ ಗುಂಡುಸೂಜಿಯ ಮೊನೆಯಷ್ಟು ಗಾತ್ರ ಗುಳ್ಳೆಗಳೆದ್ದು, ಅವುಗಳು ಛಿದ್ರವಾಗಿ ಕರಿಯ ಗುಡ್ಡೆಯ ಹೊರಪದರವು ಬಿರಿಯುವುದು. ಬೆನ್‌ಜಿನ್. ನ್ಯಾಫ್ತಲಿನ್. ಆಲ್ಕೋಹಾಲ್, ಅಸಿಟೋನ್ ಮುಂತಾದ ರಸಾಯನಿಕ ದ್ರವ ಗಳನ್ನು ಬಳಸುವ ಕಾರ್ಖಾನೆಗಳಲ್ಲಿ ಒಂದು ಬಗೆಯ ಚರ್ಮ ರೋಗ ಉಂಟಾಗಿ ಅದರ ಜೊತೆಯಲ್ಲಿ ರೆಪ್ಪೆಗಳು ಮತ್ತು ಕರಿಯ ಗುಡ್ಡೆ ತೊಂದರೆಗೀಡಾಗುವುವು. ಹಿಟ್ಟುಮಾಡುವ ಮಿಲ್ಲು ಗಳಲ್ಲಿ ಹಿಟ್ಟಿನ ಧೂಳು ಮರದ ಮಿಲ್ಲುಗಳಲ್ಲಿ ಮರದ ಧೂಳು ಕಣ್ಣಿಗೆ ಬಿದ್ದು ಕಣ್ಗೆಂಪನ್ನುಂಟುಮಾಡುವುದಲ್ಲದೆ ಕಣ್ಣೀರು ಸುರಿದು ಪಿಸುರು ಕಟ್ಟುವುದು. ಧೂಳು ಕರಿಯ ಗುಡ್ಡೆಯ ಮೇಲೆ ರಾಚಿ, ವಿಷಕ್ರಿಮಿಗಳು ಸೇರಿ, ವ್ರಣವಾಗಿ ಕಣ್ಣುಹೋಗುವ ಸಂಭವ ವುಂಟು. ಈ ಮಿಲ್ಲುಗಳಲ್ಲಿ ಕೆಲಸ ಮಾಡುವವರು ರಕ್ಷಣಾ ಕನ್ನಡಕಗಳನ್ನು ಹಾಕಿಕೊಳ್ಳುವುದು ಅತ್ಯಾವಶ್ಯಕ. ಈ ಬಗೆಯ ಧೂಳಿನ ಸಂಪರ್ಕವನ್ನು ತಡೆಯಲಾಗದ ಸೂಕ್ಷ್ಮತೆಯುಳ್ಳ ಕಣ್ಣಿರು ವವರು ಕಸಬನ್ನು ಬಿಡಬೇಕು ಇಲ್ಲವೇ ಬದಲಾಯಿಸಬೇಕು.

### 7. ರಸಾಯನಿಕ ವಿಷ ವಸ್ತುಗಳ ಸಂಪರ್ಕದಿಂದುಂಟಾಗುವ ಹಾನಿಗಳು

ರಸಾಯನಿಕ ವಿಷ ವಸ್ತುಗಳನ್ನು ಉಪಯೋಗಿಸುತ್ತಿರುವ ಕಾರ್ಖಾನೆಗಳಲ್ಲಿ ಈ ವಿಷ ವಸ್ತುಗಳ ಧೂಳನ್ನು ಸೇವಿಸುವುದರ ಮೂಲಕವೂ ಮತ್ತು ವಿಷ ವಸ್ತುಗಳನ್ನು ಮುಟ್ಟುವ ಕೈಗಳಿಂದ ಈ ವಿಷವು ಬಾಯಿಗೆ ಆಕಸ್ಮಿಕವಾಗಿ ಸೇರಿ ತನ್ಮೂಲಕ ದೇಹ

ದೊಳಕ್ಕೆ ಪ್ರವೇಶಿಸಿ ದೃಷ್ಟಿಸೂಚಕ ನರಗಳ ಮೇಲೆ ವ್ಯಾಪಿಸಿ ಕೇಂದ್ರ ದೃಷ್ಟಿಯನ್ನು ನಾಶಮಾಡುವುದಲ್ಲದೆ ದೃಷ್ಟಿನರದ ಕ್ಷಯಿಕೆಯನ್ನುಂಟುಮಾಡುವುದರಿಂದ ಪೂರ್ಣ ಕುರುಡು ಬರುವ ಸಂಭವವುಂಟು. ಸೀಸ, ಮಿಥೈಲ್, ಆಲ್ಕೋಹಾಲ್, ಕಾರ್ಬನ್‌ಡೈಸಲ್ಫೈಡ್, ಟ್ರೈಕ್ಲೋರ್‌ಯಿತಿಲಿನ್ ಮತ್ತು ಬೆನ್‌ಜಿನ್—ಈ ರಸಾಯಿನಿಕ ವಸ್ತುಗಳು ಹಾನಿ ಉಂಟುಮಾಡುವ ಪದಾರ್ಥಗಳ ಗುಂಪಿಗೆ ಸೇರಿದುವು.

8. ಉಷ್ಣಕಿರಣಗಳಿಂದುಂಟಾಗುವ ಹಾನಿಗಳು

ಇನ್‌ಫ್ರಾರೆಡ್ ಕಿರಣಗಳು ಕಣ್ಣೊಳಕ್ಕೆ ಪ್ರವೇಶಿಸಿ ಒಂದು ಬಗೆಯ ಕಣ್ಣಿನ ಪರೆಯನ್ನುಂಟುಮಾಡುವುವು. ಕಣ್ಣಿನ ಒಳಗಿರುವ ಸ್ವಾಭಾವಿಕ ಮಸೂರವು ಮಂದವಾಗಿ ದೃಷ್ಟಿಯು ಕಡಿಮೆಯಾಗುವುದು. ಗಾಜನ್ನು ತಯಾರುಮಾಡುವ ಫ್ಯಾಕ್ಟರಿಯಲ್ಲಿಯೂ ಮತ್ತು ಬ್ಲಾಸ್ಟ್‌ಫರ್ನೇಸ್‌ಗಳಲ್ಲಿಯೂ ಕೆಲಸ ಮಾಡುವವರು ಹೆಚ್ಚು ಪ್ರಕಾಶವಾದ ಬೆಳಕಿನಲ್ಲಿ ಕೆಲಸ ಮಾಡುವುದರಿಂದ ಬಹಳ ವರ್ಷಗಳ ಮೇಲೆ ಕಣ್ಣಿನಲ್ಲಿ ಪರೆ ಬಂದು ದೃಷ್ಟಿಹೀನತೆಯನ್ನು ಪಡೆಯುವರು. ಇವರು 1000—1700 ಡಿಗ್ರಿ ಉಷ್ಣಾಂಶದಲ್ಲಿ ಕೆಲಸಮಾಡಬೇಕಾಗಿರುವುದರಿಂದ ಉಷ್ಣಾಂಶದ ಕಿರಣಗಳೇ ಈ ಬಗೆಯ ತೊಂದರೆಗೆ ಕಾರಣವೆಂದು ಅಭಿಪ್ರಾಯ ಪಡುತ್ತಾರೆ. ಪರೆ ಬಂದ ಮೇಲೆ ಶಸ್ತ್ರಚಿಕಿತ್ಸೆಯು ಅವಶ್ಯಕ.

ಕುದಿಯುವ ಲೋಹಗಳಿಂದ ಹೊರಬೀಳುವ ಹೆಚ್ಚು ಪ್ರಕಾಶವಾದ ಬೆಳಕಿನ ಕಿರಣಗಳು ಈ ಬಗೆಯ ಕಾರ್ಖಾನಗಳಲ್ಲಿ ಕೆಲಸ ಮಾಡುವ ಕೆಲಸಗಾರರ ಕಣ್ಣುಗಳ ಮೇಲೆ ಕೆಟ್ಟ ಪರಿಣಾಮ

ವನ್ನುಂಟುಮಾಡುವುವು. ಆದುದರಿಂದ ಲೋಹಗಳನ್ನು ಕುದಿಸುವ
ಒಲೆಗಳ ಮುಂದೆ ಮತ್ತು ಎಲೆಕ್ಟ್ರಿಕ್ ಫರ್ನೇಸ್ ಮುಂದೆ ಕೆಲಸ
ಮಾಡುವವರು ಮತ್ತು ವೆಲ್ಡ್ ಮಾಡುವವರು ರಕ್ಷಣಾ ಕನ್ನಡಕ
ಗಳನ್ನು ಅವಶ್ಯವಾಗಿ ಉಪಯೋಗಿಸಬೇಕು.

9. ವಿದ್ಯುಚ್ಛಕ್ತಿಯಿಂದುಂಟಾಗುವ ತೊಂದರೆಗಳು

ಕರೆಂಟ್‌ನ ಶಕ್ತಿಯು ಗಾಯದ ತೀವ್ರತೆಯನ್ನು ನಿರ್ಧರಿಸು
ತ್ತದೆ. ಕಣ್ಣುರೆಪ್ಪೆಯ ಚರ್ಮವು ಸುಟ್ಟು ಗಾಯವಾಗುವುದುಂಟು.
ಇದು ಕಣ್ಣುಹುಬ್ಬಿನ ಮೇಲೂ ಕಾಣಿಸಿಕೊಳ್ಳುವುದು. ರೆಪ್ಪೆಯ
ಕೂದಲು ಸುಟ್ಟುಬೀಳುವುದು. ಕೆಲವರಿಗೆ ಕಣ್ಣೀರು ಸುರಿಯು
ವುದು. 'ಹೈ ಫ್ರೀಕ್ವೆನ್ಸಿ' ಕರೆಂಟಿಂದ ಒಂದು ಬಗೆಯ ದಿಗ್ಭ್ರಮೆ
ಯುಂಟಾಗುವುದು. ಕೆಲವರಲ್ಲಿ ಕೆಂಪು ದೃಷ್ಟಿಯು ಕಾಣಿಸಿಕೊಳ್ಳು
ವುದು. ಗಾಯಗೊಂಡವನು, ಆತನ ಸುತ್ತ ಎಲ್ಲವೂ ಕೆಂಪು
ಬಣ್ಣದಿಂದ ಕೂಡಿರುವಂತೆ ಕಾಣಿಸುವುದೆಂದು ಹೇಳುವನು.
ದೃಷ್ಟಿಯೂ ಕೂಡ ಕಡಿಮೆಯಾಗಿ ಸುಮಾರು 3–4 ವಾರಗಳ
ವರೆಗೆ ಈ ಸ್ಥಿತಿಯಲ್ಲಿರಬಹುದು. ಕೆಲವರಲ್ಲಿ ಕಣ್ಣಿನ ಸುತ್ತಲೂ
ಒಂದು ಬಗೆಯ ನೋವು ಕಾಣಿಸಿಕೊಳ್ಳುವುದುಂಟು. 'ಹೈಟೆನ್
ಷನ್' ಕರೆಂಟಿನ ತಂತಿಗಳನ್ನು ಮುಟ್ಟುವುದರಿಂದ ಕೆಲವರ ಕಣ್ಣಿ
ನಲ್ಲಿ ಒಂದು ತಿಂಗಳಾದ ಮೇಲೆ ಪರೆಯ ಚಿನ್ಹೆಗಳು ಕಾಣಿಸಿ
ಕೊಳ್ಳುವುದುಂಟು. ಪರೆಯ ಕಾರಣವು ಸರಿಯಾಗಿ ತಿಳಿದಿರುವು
ದಿಲ್ಲ.

ಕಾರ್ಖಾನೆಗಳಲ್ಲಿ ಅನುಸರಿಸಬೇಕಾದ ಮುಂಜಾಗ್ರತೆಯ ಕ್ರಮಗಳು:

[1] ಕಾರ್ಖಾನೆಗೆ ಸೇರುವವರ ದೃಷ್ಟಿಪರೀಕ್ಷೆ ನಡೆಸಿ, ಸರಿ

ದೃಷ್ಟಿಯುಳ್ಳವರನ್ನೇ ಆರಿಸಬೇಕು. ದೃಷ್ಟಿ ದೋಷವುಳ್ಳವರು ಅಪಘಾತಗಳಿಗೆ ಸುಲಭವಾಗಿ ಈಡಾಗಬಲ್ಲರು.

(2) ಕೆಲಸಗಾರರಲ್ಲಿ ಬಣ್ಣದ ಕುರುಡು, ರಾತ್ರಿಯ ಕುರುಡು ಇರಕೂಡದು.

(3) ಆಗಾಗ್ಗೆ ಕೆಲಸಗಾರರ ದೃಷ್ಟಿ ಪರೀಕ್ಷೆ ನಡೆಸಿ, ಗುರುತಿಸಿಟ್ಟಿರಬೇಕು.

(4) ಪ್ರಥಮ ಚಿಕಿತ್ಸೆ ಮತ್ತು ಆಂಬ್ಯುಲೆನ್ಸ್ ವ್ಯವಸ್ಥೆ ಸಮರ್ಪಕವಾಗಿರಬೇಕು. ಪ್ರಥಮ ಚಿಕಿತ್ಸೆಯಲ್ಲಿ ಕೆಲಸಗಾರರಿಗೆ ಶಿಕ್ಷಣ ಕೊಡಬೇಕು.

(5) ಕಾರ್ಖಾನೆಗಳಲ್ಲಿ ಬೆಳಕಿನ ಪ್ರಸರಣ ಸಮರ್ಪಕವಾಗಿರಬೇಕು. ಬೆಳಕು ಸರಿಯಾಗಿ ಇಲ್ಲದಿದ್ದಲ್ಲಿ ಅಪಘಾತಗಳಿಗೆ ಆಹ್ವಾನ ಇತ್ತಂತೆಯೇ.

(6) ವೃತ್ತಿಗನುಸಾರವಾಗಿ ರಕ್ಷಣಾ ಕನ್ನಡಕಗಳನ್ನು ಆರಿಸಬೇಕು ಮತ್ತು ಕೆಲಸಗಾರರು ಅವುಗಳನ್ನು ಹಾಕಿಕೊಳ್ಳುವಂತೆ ನೋಡಿಕೊಳ್ಳಬೇಕು. ರಕ್ಷಣಾ ಕನ್ನಡಕಗಳು ಕಣ್ಣುಗಳಿಗೆ ಸರಿಯಾಗಿ ಹೊಂದಿಕೊಂಡಿರಬೇಕು. ಆಗಾಗ್ಗೆ ರಕ್ಷಣಾ ಕನ್ನಡಕಗಳ ಶುಚಿತ್ವಕ್ಕೆ ಮತ್ತು ಅವುಗಳ ಸರಿಯಾದ ಇರುವಿಕೆಗೆ ಗಮನ ಕೊಡಬೇಕು. ಬೆವರು, ಜಿಡ್ಡು, ಧೂಳು ರಕ್ಷಣಾ ಗಾಜುಗಳ ಮೇಲೆ ಕೂಡದಂತೆ ನೋಡಿಕೊಳ್ಳಬೇಕು. ಗಾಜು ಮಂಜಾಗಿದ್ದರೆ ಕೆಲಸಗಾರನು ಅದನ್ನು ಉಪಯೋಗಿಸಲು ಇಚ್ಛಿಸುವುದಿಲ್ಲ.

(7) ಬೆವರು ಹಣೆಯಿಂದ ಸುರಿಯುವ ವೃತ್ತಿಗಳಲ್ಲಿ ಬೆವರನ್ನು ಹೀರುವ ಹಣೆಕಟ್ಟುಗಳನ್ನು ಉಪಯೋಗಿಸಬೇಕು. ಇಲ್ಲದಿದ್ದಲ್ಲಿ ಬೆವರು ಗಾಜಿನ ಮೇಲೆ ಸುರಿದು ಗಾಜನ್ನು ಮಂಜುಮಾಡುವುದು.

(8) ದ್ರಾವಕಗಳನ್ನೂ, ಆಮ್ಲಗಳನ್ನೂ ಉಪಯೋಗಿಸುವ ಕಸಬುಗಳಲ್ಲಿ ರಕ್ಷಣೆ ನೀಡುವ ಪಾರದರ್ಶಕತ್ವವಿರುವ ಮುಖ ವಾಡಗಳನ್ನು ಧರಿಸಬೇಕು.

(9) ದ್ರಾವಣಗಳು ಆಮ್ಲಗಳು ಆಕಸ್ಮಾತ್ ಕಣ್ಣುಗಳಿಗೆ ಸಿಡಿದಲ್ಲಿ ಕೂಡಲೇ ನೀರಿನಿಂದ ಪದೇಪದೇ ಕಣ್ಣುಗಳನ್ನು ಅದ್ದಿ ತೊಳೆಯಬೇಕು. ಅನಂತರ ನೇತ್ರ ಚಿಕಿತ್ಸಕನನ್ನು ಕಾಣಬೇಕು.

## 10. ಗ್ರಹಣ ಕಾಲದಲ್ಲಿ ದೃಷ್ಟಿನಾಶ

ಸೂರ್ಯಗ್ರಹಣ ಕಾಲದಲ್ಲಿ ಸೂರ್ಯನನ್ನು ಕಪ್ಪುಗಾಜಿನ ಸಹಾಯವಿಲ್ಲದೆ ನೋಡುವುದರಿಂದ ದೃಷ್ಟಿಪರೆಯ ಹಳದಿ ಬಿಂದು ವಿನ ಪ್ರದೇಶವು ಸುಟ್ಟು ದೃಷ್ಟಿ ನಾಶವಾಗುವುದುಂಟು. ನಮ್ಮಲ್ಲಿ ಕೆಲವರು ಸೂರ್ಯನನ್ನು ದಿಟ್ಟಿಸಿ ನೋಡುವ ವಾಡಿಕೆಯನ್ನಿಟ್ಟು ಕೊಂಡಿರುವರು. ಹಾಗೆ ನೋಡುವುದರಿಂದ ಕಣ್ಣಿಗೆ ಶಕ್ತಿ ಬರುವು ದೆಂಬುವ ಮೂಢನಂಬಿಕೆಯಿಂದ ಹಾಗೆ ಮಾಡುವರು. ಇದು ತಪ್ಪು. ಗ್ರಹಣ ಕಾಲದಲ್ಲಿ ರಕ್ಷಣಾ ಗಾಜಿಲ್ಲದೆ ಸೂರ್ಯನನ್ನು ನೋಡಬಾರದು.

## 11. ಮೇಹವ್ಯಾಧಿಗಳು

ಎರಡು ಕಣ್ಣಲ್ಲೂ ಕಾಣಿಸಿಕೊಂಡು ಕರಿಯ ಗುಡ್ಡೆಯ ಹೊಳ ಪನ್ನು ನಾಶಮಾಡಿ ಬೆಳಕಿನ ಕಿರಣಗಳ ಪ್ರವೇಶಕ್ಕೆ ಅಡಚಣೆ ಯಾಗಿ, ಕರಿಯ ಗುಡ್ಡೆಯು ಬಿಳುಪಾಗಿ ಮಂಜುಗಾಜಿನಂತಾ ಗುವುದು. ಮದುವೆಯ ಮುಂಚೆ ಈ ರೋಗವು ತಗುಲಿದ್ದರೆ ಖಂಡಿತವಾಗಿಯೂ ಪತ್ನಿಯ ಮತ್ತು ಭಾವಿ ಸಂತತಿಯ ಹಿತ ದೃಷ್ಟಿಯಿಂದ ಸರಿಯಾದ ವೈದ್ಯರಲ್ಲಿ ತೋರಿಸಿ ಅವರ ಸಲಹೆ

ಯನ್ನು ಪಡೆಯುವುದು ಅತ್ಯವಶ್ಯಕ. ಈ ರೋಗವಿರುವವರಿಗೆ ದೃಷ್ಟಿಮಾಂದ್ಯವು, ಕಣ್ಣೆಂಪು, ಕಣ್ಣುನೋವು ಉಂಟಾದರೆ ನೇತ್ರ ಚಿಕಿತ್ಸಕರಲ್ಲಿ ತೋರಿಸಬೇಕು.

ಪರಂಗಿ ರೋಗವು ದೃಷ್ಟಿಪಟಲದ ಊತವನ್ನು ಮತ್ತು ಕೊರಾಯಿಡ್ ಪದರದ ಊತವನ್ನು ಉಂಟುಮಾಡಬಲ್ಲದು. ಮಂಜುದೃಷ್ಟಿ ಮತ್ತು ದೃಷ್ಟಿಮಂಡಲದಲ್ಲಿ ಶೂನ್ಯ ಪ್ರದೇಶ ಗಳು ಕಾಣಿಸಿಕೊಳ್ಳುವುವು. ರಾತ್ರಿಯ ಕುರುಡು, ಕಣ್ಣಮುಂದೆ ಕಪ್ಪು ಚುಕ್ಕಿಗಳು ಉಂಟಾಗಿ ನೋಡಿದ ವಸ್ತುಗಳು ಚಿಕ್ಕ ವಾಗಿಯೂ, ವಕ್ರಾಕಾರವಾಗಿಯೂ ಕಾಣುವುವು. ಪರಂಗಿ ರೋಗವು ದೃಷ್ಟಿನರವ ಊತವನ್ನು ಕೂಡ ಉಂಟುಮಾಡಿ, ಕ್ರಮೇಣ ದೃಷ್ಟಿನರದ ಕ್ಷಯಿಕೆಯನ್ನು ತರಬಲ್ಲದು. ಇದರಿಂದ ಪೂರ್ಣ ದೃಷ್ಟಿ ನಾಶವಾಗುವುದು.

ಗೊನೇರಿಯಾ: ಈ ರೋಗದಿಂದಲೂ ಕಣ್ಣು ಹಾಳಾಗುವು ದುಂಟು. ಮೂತ್ರದಲ್ಲಿ ಈ ರೋಗ ಸಂಬಂಧದ ಕೀವು ಹೋಗು ತ್ತಿದ್ದ ಪಕ್ಷದಲ್ಲಿ ರೋಗಿಯು ಕೀವನ್ನು ಬಟ್ಟೆಯಿಂದಲೋ ಇಲ್ಲವೆ ಕೈಯಿಂದಲೋ ಒರಸಿಕೊಂಡು. ಅದೇ ಬಟ್ಟೆಯಿಂದ ಅಥವಾ ಕೈಯಿಂದ ಕಣ್ಣನ್ನು ಒರಸಿಕೊಂಡರೆ ಸಾಕು. ಕಣ್ಣುಗಳಿಗೆ ಈ ರೋಗವು ಸೋಂಕುವುದು. ಸಕಾಲದಲ್ಲಿ ಸರಿಯಾದ ಚಿಕಿತ್ಸೆ ಮಾಡ ದಿದ್ದಲ್ಲಿ ಕಣ್ಣುಗಳು ನಾಶವಾಗಿ ಕುರುಡು ಉಂಟಾಗುವುದು. ರೋಗಿಯು ತನ್ನ ಬಟ್ಟೆಗಳನ್ನು ಇತರರು ಮುಟ್ಟದಂತೆಯೂ ಮತ್ತು ತಾನು ತನ್ನ ಕಣ್ಣುಗಳನ್ನು ಕೀವು ಮುಟ್ಟಿದ ಕೈಗಳಿಂದ ಒರಸಿಕೊಳ್ಳದಂತೆಯೂ ನೋಡಿಕೊಳ್ಳಬೇಕು.ಅಲ್ಲದೆತನ್ನ ರೋಗಕ್ಕೆ ವೈದ್ಯರಿಂದ ಸರಿಯಾದ ಚಿಕಿತ್ಸೆಯನ್ನು ಹೊಂದಬೇಕು. ರೋಗ ಕಾಣಿಸಿಕೊಳ್ಳಲು ಹಿಡಿಸುವ ಕಾಲ ಕೆಲವು ಗಂಟೆಗಳಿಂದ ಮೂರು

ದಿನಗಳು ಮಾತ್ರ. ಕಣ್ಣಲ್ಲಿ ಉರಿಯುವ ನೋವು, ಕಣ್ಣುಹುಬ್ಬು ಹೊಡೆತ ಮತ್ತು ದೇಹದಲ್ಲಿ ಆಲಸ್ಯ ಮತ್ತು ಜ್ವರ ಕಾಣಿಸಿ ಕೊಳ್ಳುವುದು. ಕಣ್ಣುರೆಪ್ಪೆಗಳು ಕೆಂಪಗೆ ಊದಿಕೊಳ್ಳುವುವು; ಕಣ್ಣನ್ನು ತೆರೆಯಲಾಗುವುದಿಲ್ಲ ಸಂಧಿಪರೆಯು ಬೆಲೂನಿನಂತೆ ಊದಿ ಕರಿಯ ಗುಡ್ಡೆಯ ಸುತ್ತ ಬಳಸಿರುವುದು. ಎರಡು ದಿನಗಳ ನಂತರ ಕಣ್ಣಲ್ಲಿ ಕೀವು ಸುರಿಯಲು ಆರಂಭಿಸುವುದು. ಕರಿಯ ಗುಡ್ಡೆಯ ಮೇಲೆ ವ್ರಣಗಳು ಕಾಣಿಸಿಕೊಂಡು ಕೀತು ಬಿರಿದು ದ್ರಾಕ್ಷಿಗಣ್ಣಾಗಬಹುದು ಇಲ್ಲವೆ ಕಣ್ಣೊಳಗೆ ಕೀವು ತುಂಬಿ, ಕೀವು ಗಣ್ಣಾಗಬಹುದು. ಕೊನೆಗೆ ದೃಷ್ಟಿ ನಾಶದಲ್ಲಿ ಕೊನೆಗೊಳ್ಳುವುದು. ಈಚೆಗೆ ಬೆಳಕಿಗೆ ಬಂದ ಪೆನಿಸಿಲಿನ್ ಮತ್ತು ಸಲ್ಫ ಔಷಧಿಗಳ ಬಳಕೆಯಿಂದ ಈ ರೋಗವು ಕಣ್ಣುಗಳಿಗೆ ತಗಲುವುದು ಕಡಿಮೆ ಯಾಗಿರುತ್ತದೆ. ಶೈಶವಾವಸ್ಥೆಯಲ್ಲೇ ಗೊತ್ತು ಹಬ್ಬಿ ಸರಿಯಾದ ಚಿಕಿತ್ಸೆ ನಡೆಸಿದಲ್ಲಿ ಗುಣವು ಖಂಡಿತ. ಇದು ತಡೆಗಟ್ಟಬಹುದಾದ ಕುರುಡು. ಸಂಬಂಧಪಟ್ಟ ಆರೋಗ್ಯ ಮತ್ತು ವೈದ್ಯ ಇಲಾಖೆ ಯವರು ಮೇಹಜಾಡ್ಯಗಳ ಹರಡುವಿಕೆಯನ್ನು ತಡೆಗಟ್ಟಲು ಮುಂಜಾಗ್ರತಾ ಕ್ರಮವನ್ನೂ ರೋಗದಿಂದ ನರಳುವವರನ್ನು ಪೂರ್ಣ ಗುಣಪಡಿಸಲು ಸೂಕ್ತಕ್ರಮಗಳನ್ನೂ ಕೈಗೊಳ್ಳಬೇಕು.

## 12. ಕರಿಯ ಗುಡ್ಡೆಯ ವ್ರಣಗಳು

ಇದಕ್ಕೆ ಹಲವಾರು ಕಾರಣಗಳುಂಟು. ಕಣ್ಣೊಳಕೆ ಹೊರ ಪದಾರ್ಥಗಳು ಬಿದ್ದು ಉಜ್ಜುವಾಗ ಕರಿಯ ಗುಡ್ಡೆಯ ಮೇಲೆ ವ್ರಣಗಳಾಗುವುವು. ಹಳ್ಳಿಗಳ ಕಡೆ ಕೊಯ್ಲು ಕಟಾವುಗಳ ಕಾಲ ದಲ್ಲಿ ಬತ್ತದ, ಇಲ್ಲವೆ ರಾಗಿಯ ತೆನೆಗಳು ಆಕಸ್ಮಿಕವಾಗಿ ಕಣ್ಣಿಗೆ ಬಡಿದು ಕರಿಯ ಗುಡ್ಡೆಯ ಮೇಲೆ ವ್ರಣಗಳಾಗುವುದುಂಟು.

ಈ ಸ್ಥಿತಿಯಲ್ಲಿ ಆದಷ್ಟು ತುರ್ತು ಚಿಕಿತ್ಸೆ ನಡೆಸುವುದು ಒಳಿತು. ಇಲ್ಲದಿದ್ದರೆ ವ್ರಣವು ದೊಡ್ಡದಾಗಿ ಕರಿಯ ಗುಡ್ಡು ಬೆಳ್ಳಗಾಗಿ ಕಣ್ಣೇ ಹೋಗುವ ಸಂಭವವುಂಟು. ರೈತನು ಪೈರಿನ ದೃಷ್ಟಿಯಿಂದಲೂ, ಆರ್ಥಿಕ ದುಸ್ಥಿತಿಯಿಂದಲೂ ಕೂಡಲೇ ನೇತ್ರ ವೈದ್ಯರಲ್ಲಿಗೆ ಬರಲಾಗುವುದಿಲ್ಲ. ನಾಡವೈದ್ಯರನ್ನು ನೋಡಿ, ಕೊಯ್ಲು ಮುಗಿದ ಮೇಲೆ. ಕರಿಯ ಗುಡ್ಡು ಕೀತು ಬೆಳ್ಳಗಾದ ಮೇಲೆ ವೈದ್ಯರಲ್ಲಿಗೆ ಬರುವುದು ವಾಡಿಕೆಯಾಗಿದೆ. ಆದ್ದರಿಂದ ಹಳ್ಳಿಗಳಲ್ಲಿ ಕೊಯ್ಲು ಕಾಲದಲ್ಲಿ ಈ ತರಹದ ಕಣ್ಣಿನ ಅಪಾಯಗಳ ವಿಷಯದಲ್ಲಿ ಜನರ ತಿಳುವಳಿಕೆಯನ್ನು ಹೆಚ್ಚಿಸಬೇಕು.

# 10. ಕುರುಡನ್ನುಂಟುಮಾಡುವ ಶರೀರದ ಆಂತರಿಕ ಕಾಯಿಲೆಗಳು

ನಮ್ಮ ಜೀವಿತದಲ್ಲಿ ಸುಂದರವಾದ ಕಣ್ಣುಗಳು ದೇಹದಲ್ಲಿ ಹೊಂದಿಕೊಂಡಿರುವ ಬಹು ಮುಖ್ಯವಾದ ಸೂಕ್ಷ್ಮೇಂದ್ರಿಯಗಳು. ಆದರಿಂದ ಇವುಗಳ ಆರೋಗ್ಯ ದೇಹದ ಆರೋಗ್ಯಸ್ಥಿತಿಯನ್ನು ಪೂರ್ಣವಾಗಿ ಅವಲಂಬಿಸಿರುತ್ತವೆ. ದೇಹದ ಆರೋಗ್ಯವು ನಾವು ತೆಗೆದುಕೊಳ್ಳುವ ಆಹಾರವನ್ನು ಅನುಸರಿಸಿರುತ್ತದೆ. ಆಹಾರದ ಕೊರತೆಯಿಂದ ದೇಹಕ್ಕೆ ಅವಶ್ಯಕವಾದ ಪೋಷಣಾಂಶಗಳು ದೊರಕದೆ, ಆರೋಗ್ಯವು ಕೆಡುವುದು. ರೋಗವನ್ನು ತಡೆಗಟ್ಟುವ ಅಥವಾ ಗೆಲ್ಲುವ ಸಾಮರ್ಥ್ಯವು ಬಹಳ ಮಟ್ಟಿಗೆ ಕಡಿಮೆಯಾಗುವುದು. ದೇಹದ ಆರೋಗ್ಯವು ಕೆಟ್ಟಾಗ ದೇಹದ ಅಂಗವಾದ ಕಣ್ಣುಗುಡ್ಡೆಯೂ ದೇಹದ ಅನಾರೋಗ್ಯದಲ್ಲಿ ಭಾಗವಹಿಸುವುದು. ದೇಹದ ಅನಾರೋಗ್ಯವನ್ನು ಪ್ರತಿಬಿಂಬಿಸುವುದರಲ್ಲಿ ಕಣ್ಣು ಮೊದಲನೆಯ ಅಂಗವಾಗಿರುತ್ತದೆ. ಎಷ್ಟೋ ಸಾರಿ ಕಣ್ಣು ಬೇನೆಗೆ ಬಂದವರನ್ನು ಪರೀಕ್ಷಿಸುವಲ್ಲಿ, ರಕ್ತದ ಒತ್ತಡ, ಮಧುಮೇಹ, ಪರಂಗಿರೋಗ, ರಕ್ತಹೀನತೆ ಮೊದಲಾದ ರೋಗಗಳು ಬೆಳಕಿಗೆ ಬರುವುದುಂಟು. ರೋಗಿಗಳಿಗೆ ಅವರ ದೇಹದೊಳಗೆ ಇರುವ ರೋಗದ ಅರಿವಿಲ್ಲದೆಯೇ ಕಣ್ಣುಬೇನೆಯ ಚಿನ್ಹೆಯನ್ನೇ ಪ್ರಧಾನವಾಗಿಟ್ಟುಕೊಂಡು ನೇತ್ರವೈದ್ಯರಲ್ಲಿಗೆ ಬರುವುದುಂಟು. ಆದರಿಂದ ದೇಹದೊಳಗಿನ ಜಾಡ್ಯಗಳಿಗೂ ಮತ್ತು ಕಣ್ಣಿನ ಬೇನೆಗಳಿಗೂ ನಿಕಟ ಬಾಂಧವ್ಯವಿರುತ್ತದೆ. ದೇಹದ ಸರಿಯಾದ ಆರೋಗ್ಯ ಸ್ಥಿತಿಗೆ ನಾವು ತೆಗೆದುಕೊಳ್ಳುವ ಆಹಾರದ ಜೊತೆಗೆ ನಿರ್ನಾಳ ಗ್ರಂಥಿಗಳ ಅಂತರ್ದ್ರವವು ಮತ್ತು ಜೀವಸತ್ವಗಳು ಅವಶ್ಯಕವಾಗಿ ಇದ್ದೇ ತೀರಬೇಕು. ಈ ಮುಖ್ಯ ಸತ್ವಗಳ ಕೊರ

ತೆಯು ತೋರಿದಾಗ ಇಲ್ಲವೇ ವ್ಯತ್ಯಾಸವಾದಾಗ ಕಣ್ಣಿನಲ್ಲಿ ಅನೇಕ ವಿಧವಾದ ಬದಲಾವಣೆಗಳು ಕಂಡುಬರುತ್ತವೆ. ಆಹಾರ ದೋಷ ಗಳಿಂದಲೂ, ಜೀವಸತ್ವಗಳ ಕೊರತೆಯಿಂದಲೂ ಕಣ್ಣಿನ ಆರೋಗ್ಯ ಕೆಟ್ಟು ಸಕಾಲದಲ್ಲಿ ಸರಿಯಾದ ಚಿಕಿತ್ಸೆಯು ಒದಗದಿದ್ದಲ್ಲಿ ದೃಷ್ಟಿಯು ನಾಶವಾಗಿ ಕುರುಡುತನದಲ್ಲಿ ಕೊನೆಗೊಳ್ಳುವುದು.

## ನಿರ್ನಾಳ ಗ್ರಂಥಿಗಳು

ದೇಹದಲ್ಲಿರುವ ನಿರ್ನಾಳ ಗ್ರಂಥಿಗಳಲ್ಲೆಲ್ಲಾ ಬಹು ಮುಖ್ಯ ವಾದುದು ಕೊರಳಿನಲ್ಲಿರುವ ಥೈರಾಯಿಡ್ ಗ್ರಂಥಿ. ಇದರ ಅಂತ ರ್ದ್ರವವು ದೇಹದ ಸಮಾರೋಗ್ಯಕ್ಕೆ ಬಹಳ ಅವಶ್ಯಕ. ಅಲ್ಲದೆ ಇದರ ಆಡಳಿತಕ್ಕೆ ಇತರ ನಿರ್ನಾಳ ಗ್ರಂಥಿಗಳೂ ಕೂಡ ಒಳ ಪಟ್ಟಿರುತ್ತವೆ. ದೇಹದ ಆರೋಗ್ಯವು ನೆಟ್ಟಗಿರಬೇಕಾದರೆ ಈ ಗ್ರಂಥಿಯು ಹೆಚ್ಚು ಕಡಿಮೆಯಿಲ್ಲದೆ ಸರಿಯಾಗಿ ತನ್ನ ಕೆಲಸವನ್ನು ತಾನು ಮಾಡುತ್ತಿರಬೇಕು. ಇದರ ಅಂತರ್ದ್ರವವು ಹೆಚ್ಚಾದಾಗ ದೇಹದಲ್ಲಿ ಹಲವು ವ್ಯತ್ಯಾಸಗಳು ಕಾಣಬರುವುವು. ಇವುಗಳಲ್ಲಿ ಬಹು ಮುಖ್ಯವಾದುದು ಎದ್ದುಕಾಣುವ ದೊಡ್ಡ ಕಣ್ಣುಗಳು. ಇದಕ್ಕೆ ಗ್ರೇವ್ಸ್ ರೋಗವೆನ್ನುವರು. ಈ ರೋಗವು ಕಾಣಿಸಿ ಕೊಳ್ಳುವುದಕ್ಕೆ ಮುಂಚೆ ಕಣ್ಣುಗಳು ಅವುಗಳಿರುವ ಗೂಡಿಗೆ ಅನುಸಾರವಾಗಿ ಸರಿಯಾಗಿರುವುವು. ಈ ರೋಗದಲ್ಲಿ ಕಣ್ಣುಗಳು ಗೂಡನ್ನು ಬಿಟ್ಟು ಬಹಳ ಮುಂದೆ ಬಂದಿರುವಂತೆ ತೋರುವುವು. ಈ ರೋಗದ ಇತರ ಚಿಹ್ನೆಗಳಲ್ಲಿ ರೋಗಿಯ ತೂಕದಲ್ಲಿ ಕಡಮೆ ಯಾಗುವುದು, ನೋಡಲು ಗಾಬರಿ ಪ್ರಕೃತಿಯವನಂತೆ ತೋರು ವುದು, ವೇಗ ನಾಡಿ—ಇವು ಮುಖ್ಯವಾದವು. ಈ ಗ್ರಂಥಿಯ ಅಂತರ್ದ್ರವವು ಕಡಿಮೆಯಾದಾಗ ಮಿಕ್ಸೆಡೀಮ ಎನ್ನುವ ರೋಗ ವುಂಟಾಗುವುದು. ಈ ಸ್ಥಿತಿಯಲ್ಲಿ ದೇಹವು ಸ್ಥೂಲವಾಗಿ, ಜಡ

ಸ್ವಭಾವವು ತಲೆದೋರಿ, ಕೆಲಸ ಕಾರ್ಯಗಳನ್ನು ಮಾಡಲು ಆಸಕ್ತಿ ಇಲ್ಲದೇ ಹೋಗುವುದು. ಕಣ್ಣಿನ ಸುತ್ತಲಿರುವ ಚರ್ಮವು ಒರಟಾಗಿಯೂ ಮತ್ತು ದಪ್ಪನಾಗಿಯೂ ಆಗುವುದು. ರೋಗಿಯು ನೋಡಲು ಒಳ್ಳೆಯ ಪೆದ್ದನಂತೆ ಕಾಣುವನು.

ತಲೆಯೊಳಗಿರುವ ಪಿಟ್ಯುಟರಿ ಗ್ರಂಥಿಯು ಅಂತರ್ದ್ರವದ ಹೆಚ್ಚುವಿಕೆಯಲ್ಲಿ ರಾಕ್ಷಸಕಾಯವೂ ಮತ್ತು ದಪ್ಪನಾಗಿ ಹೊರ ಕಾಣುವ ಕೆಳದವಡೆಯೂ ಕಾಣಿಸಿಕೊಳ್ಳುವುವು. ಅಲ್ಲದೆ ಈ ಗ್ರಂಥಿಯು ದೊಡ್ಡದಾಗಿ ಹತ್ತಿರವಿರುವ ದೃಷ್ಟಿನರದ ಮೇಲೆ ಆಕ್ರಮಿಸಿಕೊಂಡು ಆ ನರವನ್ನು ಅಮುಕುವುದು, ಆದರಿಂದ ದೃಷ್ಟಿ ನರಗಳು ಕೃಶವಾಗಿ ಕ್ಷಯಿಸಿ ಪೂರ್ಣ ಅಂಧತ್ವವುಂಟಾಗುತ್ತದೆ.

ದೇಹದೊಳಗಿರುವ ನಿರ್ನಾಳ ಗ್ರಂಥಿಗಳ ಆಂತರಿಕ ಸಂಬಂಧ ವಿದ್ದೇ ಇರುತ್ತದೆ. ಒಂದು ನಿರ್ನಾಳ ಗ್ರಂಥಿಯಲ್ಲಿ ಯಾವ ವಿಧ ವಾದ ವ್ಯತ್ಯಾಸ ಉಂಟಾದರೂ ಇತರ ನಿರ್ನಾಳ ಗ್ರಂಥಿಗಳ ಕೆಲಸವೂ ಕೂಡ ಮಾರ್ಪಡುವುವು. ಆದರಿಂದ ದೇಹದ ಸರಿ ಯಾದ ಇರುವಿಕೆಗೆ ನಿರ್ನಾಳ ಗ್ರಂಥಿಗಳು ತಮ್ಮ ತಮ್ಮ ಕೆಲಸ ಗಳನ್ನು ಹೆಚ್ಚು ಕಮ್ಮಿ ಇಲ್ಲದಂತೆ ಸಮನಾಗಿ ಮಾಡುತ್ತಾ ಹೋಗು ವುದು ಆವಶ್ಯಕ.

ಮಧುಮೇಹ

ನಾವು ಸರಿಯಾದ ಆಹಾರವನ್ನು ತೆಗೆದುಕೊಂಡರೂ ಕೂಡ ಆಹಾರವನ್ನು ರಕ್ತಗತ ಮಾಡುವ ಜೀರ್ಣಾಂಗಗಳಲ್ಲಿ ದೋಷ ವಿದ್ದು ಆಹಾರವು ದೇಹಕ್ಕೆ ಸೇರದೆ ಹೋಗಬಹುದು. ಬಹು ಮೂತ್ರರೋಗದಲ್ಲಿ ಹಿಟ್ಟು ಪದಾರ್ಥಗಳ ಜೀರ್ಣತೆಯಲ್ಲಿ

ಅಭಾವವಿರುವುದರಿಂದ ರಕ್ತದಲ್ಲಿ ಸಕ್ಕರೆಯ ಅಂಶವು ಹೆಚ್ಚಾಗಿ ಕೊನೆಗೆ ಮೂತ್ರದಲ್ಲಿಯೂ ಕೂಡ ಸಕ್ಕರೆಯು ವಿಸರ್ಜಿಸಲ್ಪಡುವುದು. ಹಿಟ್ಟು ಪದಾರ್ಥಗಳ ಜೀರ್ಣತೆಗೆ ದೇಹದಲ್ಲಿರುವ ಮೇದೋಜ್ಜೀರಕ ಗ್ರಂಥಿಯು ಬಹಳ ಮುಖ್ಯವಾದ ಅಂಗವಾಗಿರುತ್ತದೆ. ಇದರಲ್ಲಿರುವ ನಿರ್ನಾಳ ಗ್ರಂಥಿಯು ಸಕ್ಕರೆಯನ್ನು ಸರಿಯಾಗಿ ಭಸ್ಮಮಾಡುವಷ್ಟು ವಸ್ತುವನ್ನು ಉತ್ಪತ್ತಿ ಮಾಡದಿರುವುದೇ ಈ ತರಹದ ಸ್ಥಿತಿಗೆ ಕಾರಣ, ಆದುದರಿಂದಲೇ ನಾವು ಈ ಸ್ಥಿತಿಯಲ್ಲಿ ಇನ್‌ಸುಲಿನ್ ವಸ್ತುವನ್ನು ಸೂಜಿಯ ಮೂಲಕ ಬಹುಮೂತ್ರ ರೋಗಿಗಳಿಗೆ ಕೊಡುವುದು. ಈ ಬಹುಮೂತ್ರ ರೋಗದಲ್ಲಿ ಶರೀರದಲ್ಲಿ ಉಂಟಾಗುವ ಇತರ ವ್ಯತ್ಯಾಸಗಳ ಜೊತೆಗೆ ಕಣ್ಣಿನಲ್ಲಿ ಕಾಣುವ ಚಿನ್ಹೆಗಳಲ್ಲಿ ದೃಷ್ಟಿಮಾಂದ್ಯವೂ, ಕಣ್ಪೊರೆಯೂ, ಪಾಪೆಯ ಪರೆಯ ಊತವೂ, ದೃಷ್ಟಿಪಟಲದ ಊತವೂ ಮತ್ತು ಕಣ್ಣಿನ ಮಾಂಸಖಂಡಗಳ ಚಲನವಲನಗಳ ವ್ಯತ್ಯಾಸವೂ ಸಾಮಾನ್ಯವಾದುವು.

## ಗೌಟ್

ಸಸಾರಜನಕಗಳ ಜೀರ್ಣತೆಯ ವ್ಯತ್ಯಾಸವೇ ಪ್ರಧಾನವಾಗಿರುವ ಗೌಟ್ ರೋಗದಲ್ಲಿಯೂ ಕೂಡ ಕಣ್ಣಿನಲ್ಲಿ ವ್ಯತ್ಯಾಸವಾಗುವುದುಂಟು. ಈ ರೋಗದಲ್ಲಿ ಕಣ್ಣೊಳಗಿರುವ ಪಾಪೆಯ ಪರೆಯು ಊದಿಕೊಂಡು ದೃಷ್ಟಿಯು ಮಂದವಾಗುವುದಲ್ಲದೆ ಕಣ್ಣೊಳಗೆ ಸಹಿಸಲಾರದಷ್ಟು ನೋವು, ಕಣ್ಣಿನ ಸುತ್ತ ನರಗಳ ಹೊಡತ ಮತ್ತು ಕಣ್ಣು ಬೆಳಕಿಗೆ ಬಿಡದಂತಾಗಿ ಕಣ್ಣಲ್ಲಿ ನೀರು ಸುರಿಯುವುದು ಮುಂತಾದ ಚಿನ್ಹೆಗಳು ತೋರುವುವು.

ಈಚೆಗೆ ಸುಣ್ಣದ ಚಯಾಪಚಯ ಕ್ರಿಯೆಯ ವ್ಯತ್ಯಾಸವು ಹತ್ತಿರ ದೃಷ್ಟಿಗೂ, ಒಂದು ಬಗೆಯ ಕಣ್ಪರೆಗೂ, ಬಾಗಿರುವ ಕರಿಯ ಗುಡ್ಡೆಗೂ ಕಾರಣವಾಗಿರಬಹುದೆಂದು ಹೇಳಲಾಗಿದೆ.

## ರಕ್ತದ ಒತ್ತಡ

ರಕ್ತದ ಒತ್ತಡದಲ್ಲೂ ಕಣ್ಣೊಳಗಿನ ದೃಷ್ಟಿಪಟಲದಲ್ಲಿ ವ್ಯತ್ಯಾಸಗಳು ಕಾಣುವುವು. ಇವು ರಕ್ತದ ಒತ್ತಡದ ತೀವ್ರತೆ ಮತ್ತು ರಕ್ತದ ಒತ್ತಡದ ಅವಧಿಯನ್ನು ಅವಲಂಬಿಸಿರುತ್ತವೆ. ಅದರಿಂದ ರಕ್ತದ ಒತ್ತಡವುಳ್ಳವರ ಕಣ್ಣು ಪರೀಕ್ಷೆ ಅಗತ್ಯ. ಒಮ್ಮೊಮ್ಮೆ ಕಣ್ಣೊಳಗೆ ರಕ್ತನಾಳಗಳು ಛಿದ್ರವಾಗಿ ರಕ್ತಸ್ರಾವವಾಗಿ ದೃಷ್ಟಿ ಹೋಗುವ ಸಂಭವವುಂಟು. ರಕ್ತವು ಹಿಮರುವುದಕ್ಕೆ ಹೆಚ್ಚು ಕಾಲ ಹಿಡಿಸುವುದು ಮತ್ತು ದೃಷ್ಟಿ ಹಿಂತಿರುಗುವುದು ಅಪರೂಪ ವೆಂದು ಹೇಳಬೇಕು. ಕೆಲವು ಸಾರಿ ದೃಷ್ಟಿನರದ ಕೇಂದ್ರ ರಕ್ತನಾಳ ದಲ್ಲಿ ರಕ್ತ ಹೆಪ್ಪುಗಟ್ಟಿಕೊಂಡು ದೃಷ್ಟಿಯು ಹಠಾತ್ತನೆ ಮಾಯ ವಾಗುವುದು. ಆದರಿಂದ ರಕ್ತದ ಒತ್ತಡವುಳ್ಳವರು ನೇತ್ರವೈದ್ಯರ ಮತ್ತು ವೈದ್ಯರ ಸಲಹೆಯನ್ನು ಪಡೆದು ಅದರಂತೆ ವರ್ತಿಸ ಬೇಕು.

## ಮೂತ್ರಪಿಂಡಗಳ ರೋಗಗಳು

ದೇಹದಲ್ಲಿ ಉತ್ಪತ್ತಿಯಾದ ವಿಷಗಳು ಮೂತ್ರದಲ್ಲಿ ವಿಸ ರ್ಜಿಸಲಾಗದೆ ರಕ್ತವನ್ನು ಹೊಕ್ಕು, ರಕ್ತದ ಒತ್ತಡವನ್ನು ಹೆಚ್ಚಿಸಿ ದೃಷ್ಟಿಪಟಲದಲ್ಲಿ ವ್ಯತ್ಯಾಸಗಳಾಗಿ ದೃಷ್ಟಿಯು ಕುಂದುವುದು.

## ಗರ್ಭಿಣಿಯ ರೋಗಗಳು

ಈ ಸ್ಥಿತಿಯಲ್ಲಿ ದೇಹದಲ್ಲಿ ವಿಷವು ಉತ್ಪತ್ತಿಯಾಗಿ, ರಕ್ತವನ್ನು

ಸೇರಿ,ರಕ್ತದ ಒತ್ತಡವನ್ನು ಹೆಚ್ಚಿಸುವುದು.ಇದ್ದಕ್ಕಿದ್ದಂತೆ ದೇಹದ ತೂಕವು ಹೆಚ್ಚುವುದು; ಕಾಲುಗಳು ಊದಿಕೊಳ್ಳುವುವು. ಮೂತ್ರದ ಉತ್ಪತ್ತಿ ಕಡಿಮೆಯಾಗುವುದು; ಎಳವು ಕಾಣಿಸಿಕೊಳ್ಳುವುದು, ದೃಷ್ಟಿಯು ಮಂಜಾಗುವುದು; ಕಣ್ಣಿನ ಮುಂದೆ ಬೆಳಕು ಹೊಳೆದಂತೆ ಆಗುವುದು. ಸರಿಯಾದ ಚಿಕಿತ್ಸೆ ದೊರಕದಿದ್ದಲ್ಲಿ ಸಾವುಂಟಾಗುವುದು. ಸ್ಥಿತಿಯು ಚಿಕಿತ್ಸೆಯ ಹತೋಟಿಗೆ ಬಾರದಿದ್ದಲ್ಲಿ ಗರ್ಭವನ್ನು ಬೆಳೆಯಬಿಡದೆ ಗರ್ಭಪಾತ ಮಾಡಬೇಕಾಗುವುದು. ಕಣ್ಣೊಳಗಿನ ದೃಷ್ಟಿಪಟಲದ ಸ್ಥಿತಿಯನ್ನು ಪರಿಶೀಲಿಸಿದ ಮೇಲೆ ನೇತ್ರವೈದ್ಯರು ಗರ್ಭಪಾತ ಮಾಡಬೇಕೇ, ಬೇಡವೇ ಎಂಬುದನ್ನು ನಿರ್ಧರಿಸುವರು. ಎರಡು ವಾರಗಳಲ್ಲಿ ದೃಷ್ಟಿಪಟಲದ ಸ್ಥಿತಿಯು ಉತ್ತಮಗೊಳ್ಳದಿದ್ದರೆ ಗರ್ಭಪಾತಕ್ಕೆ ಅಧಿಕಾರ ನೀಡಬೇಕಾಗುವುದು. ಕಣ್ಣುಗಳ ಈ ಪರಿಸ್ಥಿತಿಯು ಮುಂದುವರಿಯುತ್ತಿದ್ದಲ್ಲಿ ದೃಷ್ಟಿನಾಶ ಖಂಡಿತ. ಮುಂದೆ ಗರ್ಭ ಧರಿಸದಂತೆ ಸಲಹೆ ನೀಡಬೇಕಾಗುವುದು.

ಜ್ವರಗಳು

ಟೈಫಾಯಿಡ್, ಇನ್‌ಫ್ಲೂಯೆನ್‌ಜಾ, ಸಿಡುಬು. ದಡಾರ, ಮೆದುಳಿನ ಪರೆಊತ ಮೊದಲಾದವು ಕಣ್ಣಿನ ದೃಷ್ಟಿನರಕ್ಕೂ ವ್ಯಾಪಿಸಿ ದೃಷ್ಟಿ ನಾಶವನ್ನುಂಟುಮಾಡಬಹುದು. ಈ ರೋಗಗಳು ಸಂಧಿಪರೆ ಊತಕ್ಕೂ, ಕರಿಯ ಗುಡ್ಡೆಯ ವ್ರಣಕ್ಕೂ ಕಾರಕವಾಗಬಹುದು. ಬಹುದಿನಗಳ ಜ್ವರಗಳಲ್ಲಿ ಕಣ್ಣುಗಳನ್ನು ದಿನಕ್ಕೆ ಎರಡು ಮೂರು ಸಾರಿ ತೊಳೆದ ವ್ಯಾಸಿಲೈನ್ ಲೇಪಿಸಿ ರೆಪ್ಪೆಗಳನ್ನು ಮುಚ್ಚಿಡಬೇಕು. ಕರಿಯ ಗುಡ್ಡು ಹೊರಕ್ಕೆ ಕಾಣದಂತೆ ನೋಡಿಕೊಳ್ಳಬೇಕು. ಪ್ರಜ್ಞಾಹೀನ ಸ್ಥಿತಿಯಲ್ಲಿ ರೆಪ್ಪೆಗಳನ್ನು ಮುಚ್ಚುವ ಕ್ರಿಯೆಯು ಸಮರ್ಪಕವಾಗಿರುವುದಿಲ್ಲ. ಕಣ್ಗೆಂಪು,

ಕಣ್ಣು ಪಿಸುರು ಕಟ್ಟುವುದು, ದೃಷ್ಟಿಮಾಂದ್ಯ ಕಂಡ ಒಡನೇ ನೇತ್ರ ಚಿಕಿತ್ಸಕರಿಗೆ ತೋರಿಸಬೇಕು.

ಕ್ಷಯ, ಕುಷ್ಠರೋಗ ಇವುಗಳು ಪಾಪೆಯ ಪರೆ ಊತವನ್ನು, ಕರಿಯ ಗುಡ್ಡೆಯ ಊತವನ್ನು ಉಂಟುಮಾಡಿ ಕುರುಡನ್ನುಂಟು ಮಾಡಬಲ್ಲವು. ಕ್ಷಯವು ದೃಷ್ಟಿಪಟಲಕ್ಕೂ ವ್ಯಾಪಿಸಿ ದೃಷ್ಟಿ ಪಟಲದಲ್ಲಿ ರಕ್ತಸ್ರಾವವನ್ನುಂಟು ಮಾಡುವುದು. ಇದು ಹರೆಯ ದವರನ್ನೇ ಕಾಡಿಸುವುದು.

ರಕ್ತಹೀನತೆಯು ಕುರುಡನ್ನುಂಟು ಮಾಡಬಲ್ಲದು. ಇದರಲ್ಲಿ ದೃಷ್ಟಿನರವು ಕ್ಷಯಿಸಿ ದೃಷ್ಟಿ ನಾಶವನ್ನುಂಟುಮಾಡುವುದು.

ಕೆಲವು ವಿಷಗಳು ದೃಷ್ಟಿನರದ ಮೇಲೆ ನೇರವಾದ ಪ್ರಭಾವ ವನ್ನು ಬೀರಿ ಕುರುಡನ್ನುಂಟುಮಾಡುವುದು. ಟೊಬ್ಯಾಕೊ, ಕಳ್ಳಭಟ್ಟಿ ಸಾರಾಯಿ, ಕಾರ್ಬನ್‌ಬೈ ಸಲ್ಫೈಡ್, ಡೈನೈಟ್ರೊ ಬೆನ್‌ಜಾಲ್, ಐಯಡೋಫಾರಂ, ಗಾಂಜಾ, ಅಫೀಮು, ಸೀಸ ಮತ್ತು ಆರ್ಸನಿಕ್ ಮೊದಲಾದುವು ಈ ಗುಂಪಿಗೆ ಸೇರಿದ ವಿಷ ಗಳು. ಈ ವಿಷಗಳು ದೃಷ್ಟಿನರ ಮತ್ತು ನರಾಣುಗಳ ಮೇಲೆ ಪ್ರಭಾವ ಬೀರುವುವು. ಮಿಥೈಲ್ ಆಲ್ಕೋಹಾಲ್ ಸಾಧಾರಣ ವಾಗಿ ಈ ಕಳ್ಳಭಟ್ಟಿಯ ಸಾರಾಯಿಯ ಪ್ರಧಾನ ವಸ್ತು. ಇದರ ಸೇವನೆಯಿಂದ ದೃಷ್ಟಿನರವು ಊದಿಕೊಂಡು 24 ಗಂಟೆಗಳೊಳ ಗಾಗಿ ದೃಷ್ಟಿನಾಶ ಸಂಭವಿಸುವುದು.

# 11. ವಯಸ್ಸಾದವರಲ್ಲಿ ಕುರುಡನ್ನುಂಟು ಮಾಡುವ ರೋಗಗಳು

## 1. ಕಣ್ಪೊರೆ

ಅಂಧತ್ವವನ್ನುಂಟುಮಾಡುವ ಕಣ್ಣಿನ ರೋಗಗಳಲ್ಲಿ ಕಣ್ಪೊರೆ ಬಹುಮುಖ್ಯ ಕಾರಣವಾಗಿರುತ್ತದೆ. ಇದು ಉತ್ತರ ಭಾರತ ದಲ್ಲಿ ಹೆಚ್ಚಿಗೆ ಕಂಡುಬರುವುದು. ಯೂರೋಪು, ಅಮೆರಿಕೆ ಯಲ್ಲಿ ಕಣ್ಪೊರೆಯು ಬಹು ಅಲ್ಪ ಪ್ರಮಾಣದಲ್ಲಿ ಕಂಡುಬರುತ್ತದೆ. ಇದರ ಹುಟ್ಟಿಗೂ ಮತ್ತು ಬೆಳವಣಿಗೆಗೂ ಆಹಾರಾಂಶಗಳ ಅಭಾವವೂ, ದೇಹದ ಆಂತರಿಕ ವ್ಯಾಧಿಗಳೂ ಕಾರಣ. ಇದು ಹಳ್ಳಿಗರಲ್ಲಿ ಹೆಚ್ಚು ಪ್ರಮಾಣದಲ್ಲಿ ಕಂಡುಬರುತ್ತದೆ. ಇದು ಕಾಣಿಸಿಕೊಳ್ಳುವ ವಯಸ್ಸು 50ರಲ್ಲಿ. 40 ವಯಸ್ಸಿಗಿಂತ ಮುಂಚೆಯೂ ಹಲವರಲ್ಲಿ ಕಾಣಿಸಿಕೊಳ್ಳುವುದು. ವಂಶಪಾರಂ ಪರ್ಯವಾಗಿ ಕಂಡಲ್ಲಿ ಮುಂದಿನ ಪೀಳಿಗೆಯವರಲ್ಲಿ ಇನ್ನೂ ಚಿಕ್ಕ ವಯಸ್ಸಿನಲ್ಲಿಯೇ ಕಾಣಿಸಿಕೊಳ್ಳುವುದು. ಕಣ್ಣಿನ ಕೆಲವು ರೋಗ ಗಳು ಪಾಪೆಯ ಪರೆಊತ, ಕೊರಾಯಿಡ್ ಪದರದ ರೋಗಗಳು, ಹೆಚ್ಚು ಹತ್ತಿರ ದೃಷ್ಟಿಯ ದೋಷಗಳು, ದೃಷ್ಟಿಪಟಲದ ಸ್ಥಾನಪಲ್ಲಟ, ರಾತ್ರಿ ಅಂಧತ್ವ ಮೊದಲಾದುವು ಕಣ್ಪೊರೆಯೊಂದಿಗೆ ಬೆರತಿರುವುದುಂಟು. ಈ ಸ್ಥಿತಿಗಳಿಗೆ ಶಸ್ತ್ರಚಿಕಿತ್ಸೆ ನಡೆಸಿದರೂ ಈ ರೋಗಗಳ ಹಿನ್ನೆಲೆ ಇರುವುದರಿಂದ ದೃಷ್ಟಿ ತೃಪ್ತಿಕರವಾಗಿ ಹಿಂದಿರುಗುವುದಿಲ್ಲ. ಕೆಲವು ವಿಷಗಳ ಪ್ರಯೋಗದಿಂದ ಪ್ರಯೋಗ ಶಾಲೆಗಳಲ್ಲಿ ಕಣ್ಪೊರೆಗಳನ್ನುಂಟು ಮಾಡಿರುತ್ತಾರೆ. ಈ ವಿಷಗಳಲ್ಲಿ ನ್ಯಾಪ್ತಲಿನ್, ಲ್ಯಾಕ್ಟೋಸ್, ಥಾಲಿಯಂ ಮತ್ತು ಡೈನೈಟ್ರೊ

ಫಿನಾಲ್ ಇವು ಮುಖ್ಯವಾದುವು. ಈ ಗುಂಪಿಗೆ ವಿಷಜನ್ಯಪರೆ ಎನ್ನುವರು.

ಕೆಲವು ಜ್ವರಗಳಲ್ಲಿ ಸ್ಕಾರ್‌ಲೆಟ್ ಜ್ವರ, ಮೆದುಳುಪದರದ ಊತ, ದೇಹವು ವಿಷಕ್ರಿಮಿಗಳಿಂದ ವಿಷಪೂರಿತವಾಗಿರುವುದರಿಂದ ಕಣ್ಪರೆಗಳು ಕಂಡಿರುವುದೂ ಉಂಟು. ಆದುದರಿಂದ ದೇಹದಲ್ಲಿ ಯಾವ ವಿಷದ ಸೋಂಕು ಹೆಚ್ಚಾದರೂ ಅಥವಾ ಸ್ವಲ್ಪವೇ ಬಹು ಕಾಲದವರೆಗಿದ್ದರೂ ಕಣ್ಣೊಳಗಿನ ಮಸೂರವಲ್ಲಿ ಬದಲಾವಣೆಗಳನ್ನುಂಟು ಮಾಡಬಹುದು. ವಿಷವನ್ನು ಹೊರಗೆ ದೂಡುವುದರಿಂದ ಈ ಬದಲಾವಣೆಗಳನ್ನು ಪ್ರಾಯಶಃ ತಡೆಗಟ್ಟಬಹುದು.

ಕೆಲವು ನಿರ್ನಾಳ ಗ್ರಂಥಿಗಳ ವ್ಯತ್ಯಾಸದಿಂದ ಕೆಲವು ಬಗೆಯ ಕಣ್ಪರೆಗಳು ಬರುವುದುಂಟು. ಮಧುಮೇಹ, ಮೇದೋಜೀರಕ ಗ್ರಂಥಿಯ ಸೋಲುವಿಕೆ,ಪ್ಯಾರಾಥೈರಾಯಿಡ್ ಗ್ರಂಥಿಯ ಸೋಲುವಿಕೆ, ಕ್ಯಾಲ್ಸಿಯಂ ಅಭಾವ, ಥೈರಾಯಿಡ್ ಗ್ರಂಥಿಯ ಉದ್ರೇಕ, ಪಿಟ್ಯೂಟರಿ ಗ್ರಂಥಿಯ ಉದ್ರೇಕ–ಈ ಸ್ಥಿತಿಗಳಲ್ಲೂ ಕಣ್ಪರೆ ಕಾಣಿಸಿಕೊಳ್ಳುವುದುಂಟು.

ಕಣ್ಣೊಳಗಿರುವ ಮಸೂರದಲ್ಲಿ ಭೌತಿಕ, ರಸಾಯನಿಕ ಬದಲಾವಣೆಗಳುಂಟಾಗಿ ಅದರ ಸ್ವಚ್ಛಂದತೆಯು ನಶಿಸಿ ಕಣ್ಪರೆ ಬರುವುದು. ಆದರೂ ಇದರ ಸರಿಯಾದ ಕಾರಣವು ಪೂರ್ಣವಾಗಿ ತಿಳಿದಿಲ್ಲವೆಂದೇ ಹೇಳಬೇಕು. ಪ್ರಾಣಿಗಳಿಂದ ನಡೆಸಿದ ಪ್ರಯೋಗಗಳಿಂದ ಕೂಡ ಕಣ್ಪರೆಯ ಕಾರಣಗಳು ಬೆಳಕಿಗೆ ಬಂದಿಲ್ಲ. ಸ್ಥೂಲವಾಗಿ ಹಲವಾರು ಈ ಪ್ರಯೋಗಗಳ ಫಲವಾಗಿ ಆಹಾರದಲ್ಲಿ ಜೀವಸತ್ವ 'ಡಿ' ಮತ್ತು ಕ್ಯಾಲ್ಸಿಯಂ ಲವಣಗಳ ಅಭಾವವು

ಬಹುಶಃ ಕಣ್ಪೊರೆಯ ಕಾರಣಗಳಾಗಿರಬಹುದೆಂದು ಊಹಿಸಿದ್ದಾರೆ. ಆಗ ತಾನೆ ಪ್ರಾರಂಭವಾದ ಕಣ್ಪೊರೆಯುಳ್ಳ ಕೆಲವರಿಗೆ ಕ್ಯಾಲ್ಸಿಯಂ ಮತ್ತು ಜೀವಸತ್ವ 'ಡಿ' ಯನ್ನು ಕೊಟ್ಟು ನೋಡಲಾಯಿತು. ಕೆಲವು ತಿಂಗಳಾದ ಮೇಲೆ 9 ರಲ್ಲಿ 5 ಮಂದಿಗೆ ಬಹು ಸ್ವಲ್ಪ ದೃಷ್ಟಿಯು ತಿಳಿಯಾದಂತೆ ಕಂಡಿತು.

ವಯಸ್ಸಾದವರಲ್ಲಿ ಕಾಣಿಸಿಕೊಳ್ಳುವ ಕಣ್ಪೊರೆಗೆ ವಯೋದೋಷವೇ ಕಾರಣವೆಂದು ಹಲವರ ಅಭಿಮತ. ಇತರ ಅಂಗಾಂಗಗಳು ವಯಸ್ಸಾಗಿ ಬದಲಾವಣೆಗಳನ್ನು ಹೊಂದುವಂತೆಯೇ ಕಣ್ಣೊಳಗಿನ ಮಸೂರವೂ ಕೂಡ ವಯಸ್ಸಿನ ಬದಲಾವಣೆಯಲ್ಲಿ ಭಾಗವಹಿಸುವುದು. ಇದನ್ನು ಕೂದಲು ಬೆಳ್ಳಗಾಗುವುದಕ್ಕೂ ಉಗುರು ಒರಟಾಗುವುದಕ್ಕೂ ಮತ್ತು ಚರ್ಮವು ಸುಕ್ಕುಬೀಳುವುದಕ್ಕೂ ಹೋಲಿಸಬಹುದು. ಇವೆಲ್ಲವೂ ವಯಸ್ಸಾದುದರ ಮುಖ್ಯ ಬದಲಾವಣೆಗಳು. ಈ ಬದಲಾವಣೆಗಳಿಗೆ ಜೀವನದ ಏರಿಳಿತಗಳು, ನಿರ್ನಾಳ ಗ್ರಂಥಿಗಳ ಸೋಲು ಮತ್ತು ದೈಹಿಕ ಸ್ಥಿತಿಯೂ ಕಾರಣವಾಗಿರಬಹುದು. ಹಲವರು. ವಯಸ್ಸಾದವರಲ್ಲಿ ಕಣ್ಣಿಗೆ ರಕ್ತ ಚಲನೆ ಕುಂಠಿತವಾಗಿರುವುದರಿಂದ ಆಂತರಿಕ ದ್ರವದಲ್ಲಿ ವ್ಯತ್ಯಾಸವುಂಟಾಗಿ ಕಣ್ಪೊರೆ ಬರುವುದೆಂದು ಅಭಿಪ್ರಾಯವುಳ್ಳವರಾಗಿರುತ್ತಾರೆ. ಒಟ್ಟಿನಲ್ಲಿ ಕಣ್ಪೊರೆಯ ಸ್ಪಷ್ಟಕಾರಣವು ಮತ್ತು ಅದು ಆಗುವ ಬಗೆ ಇನ್ನೂ ತಿಳಿದಿಲ್ಲ. ಇದಕ್ಕೆ ಹಲವು ಮತಗಳಿರುವುದರಿಂದ ಕಾರಣಗಳು ಹಲವಾರು ಉಂಟು.

ಪರೆಯ ಚಿನ್ಹೆಗಳು : ಮೊದಮೊದಲು ದೃಷ್ಟಿಯಲ್ಲಿ ಅಡಚಣೆಗಳು, ಅನಂತರ ದೃಷ್ಟಿಮಾಂದ್ಯ, ಕೊನೆಗೆ ದೃಷ್ಟಿ ನಾಶ – ಇವು ಪರೆಯ ಚಿನ್ಹೆಗಳು. ದೃಷ್ಟಿಮಾಂದ್ಯವು ಕಣ್ಣೊಳಗಿನ ಮಸೂರದಲ್ಲಿ ಯಾವ ಭಾಗದಲ್ಲಿ ಪರೆ ತೋರಿದೆ ಎಂಬುದರ

ಮೇಲೆ ಅವಲಂಬಿಸಿರುತ್ತದೆ. ಮಸೂರದ ಮಧ್ಯದಲ್ಲಿ ಪರೆಯಿದ್ದಲ್ಲಿ ದೃಷ್ಟಿಯು ಬಹುಮಟ್ಟಿಗೆ ಕುಂಠಿತವಾಗಿರುತ್ತದೆ. ಅಂಚಿನ ಹತ್ತಿರ ಪರೆಯಿದ್ದು ಮಧ್ಯಭಾಗದಲ್ಲಿ ಸ್ವಚ್ಛವಾಗಿದ್ದರೆ ದೃಷ್ಟಿಗೆ ಯಾವ ಅಡಚಣೆಯೂ ಇರುವುದಿಲ್ಲ. ಮಸೂರದ ಮಧ್ಯದಲ್ಲಿ ಪರೆಯುಳ್ಳಾತ, ಬೆಳಕು ಕಡಿಮೆಯಾದಂತೆಲ್ಲಾ ದೃಷ್ಟಿಯು ಉತ್ತಮಗೊಳ್ಳುವುದೆಂದು ಹೇಳುವನು. ಏಕೆಂದರೆ ಬೆಳಕು ಕಡಿಮೆಯಾದಾಗ ಪಾಪೆಯು ಹಿಗ್ಗುವುದರಿಂದ ಬೆಳಕಿನ ಕಿರಣಗಳು ಮಸೂರದ ಅಂಚಿನಿಂದ ಹೋಗುವುದರಿಂದ ಬಿಂಬವು ಉತ್ತಮಗೊಳ್ಳುವುದು. ಮಸೂರದ ಅಂಚಿನಲ್ಲಿ ಪರೆಯುಳ್ಳಾತನು ಬೆಳಕು ಹೆಚ್ಚಾದಂತೆ ದೃಷ್ಟಿಯು ಉತ್ತಮಗೊಂಡಂತೆ ಹೇಳುವನು. ಅಂದರೆ ಮಧ್ಯಾಹ್ನ ಅಥವಾ ಬಿಸಿಲು ಹೆಚ್ಚಿದಂತೆ ಕಣ್ಣಿನ ದೃಷ್ಟಿಯು ಸರಿಹೋಗುವಂತೆ ಹೇಳುವನು. ಬೆಳಕು ಹೆಚ್ಚಾದಾಗ ಪಾಪೆಯು ಕಿರಿದಾಗುವುದರಿಂದ ಬೆಳಕಿನ ಕಿರಣಗಳು ಮಸೂರದ ಮಧ್ಯೆ ಅಡಚಣೆಯಿಲ್ಲದೆ ಪ್ರವೇಶಿಸುವುದರಿಂದ ಬಿಂಬವು ದೃಷ್ಟಿಪಟಲದ ಮೇಲೆ ಸ್ಪಷ್ಟವಾಗಿ ಬೀಳುವುದು. ಕಣ್ಪೊರೆಯುಳ್ಳ ರೋಗಿಯು ಮೊದಮೊದಲು ದೃಷ್ಟಿ ಮಂಡಲದಲ್ಲಿ ಕಪ್ಪು ಚುಕ್ಕಿಗಳು ಗೋಚರಿಸುವುವೆಂದು ಹೇಳುವನು. ಅಲ್ಲದೆ ಈ ಚುಕ್ಕಿಗಳು ಕಣ್ಣುಗಳು ಚಲಿಸುವ ಕಡೆಯೇ ಚಲಿಸುವುವೆಂದು ಹೇಳುವನು. ಅನಂತರ ಒಂದೇ ಕಣ್ಣಿನಲ್ಲಿ ಹಲವಾರು ಬಿಂಬಗಳು ವಕ್ರವಕ್ರವಾಗಿ ಕಾಣಿಸುವುವು ಎಂದು ಹೇಳುವನು. ಅಲ್ಲದೆ ದೀಪದ ಸುತ್ತ ಬಣ್ಣಬಣ್ಣದ ವರ್ತುಲಗಳು ಕಾಣಿಸುವುವು.

ಮಸೂರದೊಳಗೆ ಉಂಟಾಗುವ ಬದಲಾವಣೆಗಳಿಂದ ಒಂದು ಬಗೆಯ ಹತ್ತಿರ ದೃಷ್ಟಿ ಬರುವುದು. ಇದರಿಂದ ತನ್ನ ದೃಷ್ಟಿ ಉತ್ತಮಗೊಂಡಿತೆಂದೂ, ಕನ್ನಡಕದ ಸಹಾಯ ಬೇಕಿಲ್ಲವೆಂದೂ ತೃಪ್ತಿ ಹೊಂದುವನು. ಆದರೆ ಈ ದೋಷವು ಬೆಳೆದಂತೆ

ದೃಷ್ಟಿಯು ಬಹುಮಟ್ಟಿಗೆ ಮಂಕಾಗಿ ಕಡೆಗೆ ದೃಷ್ಟಿ ಪೂರ್ಣ ಹೋಗಿ ಬೆಳಕನ್ನು ನೋಡುವ ಮತ್ತು ಗುರುತಿಸುವ ಶಕ್ತಿ ಮಾತ್ರ ಉಳಿಯುವುದು. ಕಣ್ಪೊರೆಯು ಯಾವಾಗ ಬಲಿಯುವುದೆಂಬುದನ್ನು ನಿರ್ಧಾರವಾಗಿ ಹೇಳುವಂತಿಲ್ಲ. ಕೆಲವರಲ್ಲಿ ಮಸೂರದಲ್ಲಿ ಕಣ್ಪೊರೆಯ ಪ್ರದೇಶಗಳು ಸ್ತಬ್ಧತೆಯನ್ನು ತಾಳಿ ಹಲವಾರು ವರ್ಷಗಳವರೆಗೂ ಬೆಳವಣಿಗೆಯನ್ನು ಹೊಂದದೆ ಹಾಗೆಯೇ ಇರಬಹುದು. ಇನ್ನು ಕೆಲವರಲ್ಲಿ ವಯಸ್ಸು ಹೆಚ್ಚಿದಂತೆ ಕಣ್ಪೊರೆಯೂ ಬೇಗ ಬೆಳೆಯುತ್ತಾ ಬಂದು ಶಸ್ತ್ರಚಿಕಿತ್ಸೆ ಮಾಡುವ ಹಂತವನ್ನು ಮುಟ್ಟಬಹುದು.

ಕಣ್ಪೊರೆಯನ್ನು ಶಸ್ತ್ರಚಿಕಿತ್ಸೆಗೆ ಒಳಪಡಿಸದೆ ಹಾಗೆಯೇ ಬಿಡುವುದರ ಪರಿಣಾಮ :

(i) ದೃಷ್ಟಿನಾಶ

(ii) ಕಣ್ಣೊಳಗಿರುವ ಮಸೂರವು ಊದಿ ಸುತ್ತಲಿರುವ ಸಿಲಿಯರಿ ಅಂಗವನ್ನು ಒತ್ತುವುದರಿಂದ ಕಣ್ಣೊಳಗಿನ ಅಂತರ್ದ್ರವದ ಶೋಷಣೆಗೆ ಭಂಗ ಬಂದು ಕಣ್ಣೊಳಗಿನ ಅಂತರ್ದ್ರವದ ಒತ್ತಡ ಹೆಚ್ಚುವುದು. ಅಲ್ಲದೆ ಹತ್ತಿರವೇ ಪಾಪೆಯ ಪರೆಯಿರುವುದರಿಂದ ಅದು ಕೆರಳಿ ಊದಿಕೊಳ್ಳುವುದು. ಇದರಿಂದ ಅಂತರಿಕ ದ್ರವದ ಚಲನೆಗೆ ಅಡಚಣೆ ಇನ್ನೂ ಹೆಚ್ಚುವುದು. ಇದರಿಂದ ಕಣ್ಣೊಳಗೆ ನೋವು ಹೆಚ್ಚಿ ದೃಷ್ಟಿನರ ಕ್ಷಯಿಸಿ ದೃಷ್ಟಿ ನಾಶವಾಗುವುದಲ್ಲದೆ ಶಸ್ತ್ರಚಿಕಿತ್ಸೆ ನಡೆಸಲೂ ಕಷ್ಟವಾಗುವುದು.

(iii) ಕಣ್ಪೊರೆಯನ್ನು ಹೆಚ್ಚು ಬಲಿಯಲುಬಿಡುವುದರಿಂದಲೂ ಕೂಡ ಕಣ್ಣೊಳಗಿನ ಅಂತರಿಕ ದ್ರವದ ಒತ್ತಡವು ಹೆಚ್ಚಲು ಅವಕಾಶ ಕೊಟ್ಟಂತಾಗುವುದು.

(iv) ಮಸೂರವನ್ನು ಸ್ಥಾನದಲ್ಲಿಟ್ಟಿರುವ ದಾರಗಳು ಶಿಥಿಲಗೊಂಡು ಮಸೂರದ ಸ್ಥಾನಪಲ್ಲಟವಾಗಬಹುದು. ಹಿಂಬದಿಗೆ ಪಲ್ಲಟಗೊಂಡರೆ ಸ್ವಲ್ಪಕಾಲದವರೆಗೆ ಏನೂ ಆಗಲಾದರು. ಮುಂದಕ್ಕೆ ಬಿದ್ದರೆ ಪಾಪೆಯ ರಂಧ್ರದಲ್ಲಿ ಸಿಕ್ಕಿ ಬೀಳಬಹುದು. ಇಲ್ಲವೆ ಪಾಪೆಯ ಮುಂದಿರುವ ಕೋಣೆಯಲ್ಲಿ ಸಿಕ್ಕಿಬೀಳಬಹುದು. ಹೀಗಾಗುವುದರಿಂದ ಅಂತದ್ರ್ರವದ ಚಲನೆಗೆ ಅಡ್ಡಿಯುಂಟಾಗಿ ಪಾಪೆಯ ಪರೆಯು ಕೆರಳಿ ಕಣ್ಣೊಳಗೆ ಅಂತದ್ರ್ರವದ ಒತ್ತಡ ಹೆಚ್ಚುವುದು. ಆದುದರಿಂದ ಕಣ್ಪರೆಯನ್ನು ಸಕಾಲದಲ್ಲಿ ಸರಿಯಾದವರಿಂದ ಚಿಕಿತ್ಸೆ ಮಾಡಿಸಬೇಕು.

ಒಂದು ಸಾರಿ ಮಸೂರದಲ್ಲಿ ಬದಲಾವಣೆಗಳಾದಲ್ಲಿ ಅವುಗಳನ್ನು ಹೋಗಲಾಡಿಸುವುದು ಅಸಾಧ್ಯ. ಆದುದರಿಂದ ಮಸೂರದಲ್ಲಿ ಕಾಣುವ ಪರೆಯನ್ನು ಹಿಂದಿರುಗಿಸಲು ಸಾಧ್ಯವೇ ಇಲ್ಲ. ಶಸ್ತ್ರಚಿಕಿತ್ಸೆಯೊಂದೇ ಉಳಿದಿರುವ ಮಾರ್ಗ.

ಮಧುಮೂತ್ರ ರೋಗದಿಂದುಂಟಾಗುವ ಕಣ್ಪರೆಯ ಸಂದರ್ಭದಲ್ಲಿ ಡಯಾಬಿಟೀಸ್ ರೋಗವನ್ನು ಹತೋಟಿಯಲ್ಲಿಡುವುದರ ಮೂಲಕ ಕಣ್ಪರೆಯ ಬೆಳವಣಿಗೆಯನ್ನು ತಡೆಗಟ್ಟಬಹುದು.

ಕಣ್ಪರೆ ಕಂಡ ವ್ಯಕ್ತಿಯನ್ನು ವಿಶದವಾಗಿ ವೈದ್ಯ ಪರೀಕ್ಷೆಗೆ ಗುರಿಪಡಿಸಬೇಕು. ಹೀಗೆ ಮಾಡುವಾಗ ಅವನಿಗೆ ಅರಿವಿಲ್ಲದೆ ಇರುವ ರೋಗಗಳು ಬೆಳಕಿಗೆ ಬರುವುದುಂಟು. ಶಸ್ತ್ರಚಿಕಿತ್ಸೆಗೆ ಗುರಿಪಡಿಸುವ ಮೊದಲು ದೇಹದಲ್ಲಿ ಇತರ ರೋಗಗಳಿವೆಯೇ ಎಂಬುದನ್ನು ನೋಡುವುದು ಶಸ್ತ್ರಚಿಕಿತ್ಸೆಯ ಫಲದ ದೃಷ್ಟಿಯಿಂದಲೂ ಮತ್ತು ರೋಗಿಯ ದೃಷ್ಟಿಕೋಣದಿಂದಲೂ ಬಹು ಮುಖ್ಯ. ಡಯಾಬಿಟೀಸ್ ಹೊತ್ತ ರೋಗಿಗಳು ಶಸ್ತ್ರಚಿಕಿತ್ಸೆಗೆ

ಯೋಗ್ಯರಲ್ಲ. ಅವರ ಡಯಾಬಿಟೀಸ್ ರೋಗವನ್ನು ಹತೋಟಿಗೆ ತಂದನಂತರವೇ ಶಸ್ತ್ರಚಿಕಿತ್ಸೆ ನಡೆಸಬೇಕು. ಕಣ್ಪೊರೆಯ ಸೂಚನೆಗಳು ಆಗತಾನೆ ಪ್ರಾರಂಭವಾಗಿದ್ದಲ್ಲಿ ಅವರ ಆರೋಗ್ಯದ ಕಡೆ ಗಮನ ಕೊಡುವುದರಿಂದ ಕಣ್ಪೊರೆಯ ಬೆಳವಣಿಗೆಯ ವೇಗವನ್ನು ಕಡಿಮೆ ಮಾಡಬಹುದು. ಅವರ ಆಹಾರದಲ್ಲಿ ಸಾಕಷ್ಟು ಜೀವ ಸತ್ವಗಳು (ಹಸಿರು ಕಾಯಿಪಲ್ಯ, ಕ್ಯಾರೆಟ್, ನಿಂಬೆರಸ ಮೊದಲಾದುವುಗಳು), ಸಾಕಷ್ಟು ನೀರು, ಪುಷ್ಟಿಕರವಾದ ಆಹಾರ ವಸ್ತುಗಳು ಇರಬೇಕು. ಕೆಲಸ, ವಿಶ್ರಾಂತಿ, ಮನರಂಜನೆ ಮತ್ತು ಜೀವನದ ಒತ್ತಡಗಳ ವಿಷಯದಲ್ಲಿ ಸೂಕ್ತಸಲಹೆಗಳನ್ನು ಕೊಡಬೇಕು.

ಕಣ್ಪೊರೆ ಬೆಳೆಯುತ್ತಿರುವ ವ್ಯಕ್ತಿಯನ್ನು ಆರು ತಿಂಗಳಿಗೊಮ್ಮೆ ಪರೀಕ್ಷಿಸುತ್ತಿರಬೇಕು. ಅವನಿಗೆ ಕನ್ನಡಕವೇನಾದರೂ ಉಪಯೋಗವಾಗುವಲ್ಲಿ ಅದನ್ನು ಸೂಚಿಸಬೇಕು. ಮಾಡುವ ಹತ್ತಿರದ ಕೆಲಸಕ್ಕೆ ಸರಿಯಾಗಿ ಬೆಳಕು ಪ್ರಸರಿಸುವಂತೆ ನೋಡಿಕೊಳ್ಳಬೇಕು. ಓದುವ, ಬರೆಯುವ ಕೆಲಸಗಳಿಗೆ ಅನುಕೂಲಿಸುವಂತೆ ಕೋಣೆಯಲ್ಲಿ ಬೆಳಕಿನ ಪ್ರಸರಣಕ್ಕೆ ಅನುಕೂಲ ಮಾಡಿಕೊಡಬೇಕು. ಕೆಲವರು ವೈದ್ಯರು ಬಣ್ಣದ ಗಾಜುಗಳಿಂದಲೂ, ಹತ್ತಿರಕ್ಕೂ ಮತ್ತು ದೂರಕ್ಕೂ ಉತ್ತಮವಾಗುವ ಗಾಜುಗಳನ್ನು ಕೊಡುವುದರಿಂದಲೂ ಕೊಂಚ ಕಾಲ ಇರುವ ದೃಷ್ಟಿಯಿಂದ ನೂಕಬಹುದು. ಕಣ್ಪೊರೆಯು ಬಲಿತು ಶಸ್ತ್ರಚಿಕಿತ್ಸೆ ಮಾಡಲು ಅನುಕೂಲವಾಗದಿದ್ದಲ್ಲಿ ರೋಗಿಗೆ ಸಹಾಯ ಮಾಡಲು ಆತನ ಹತ್ತಿರದವರು ಓದಿ ಬರೆಯುವ ಕೆಲಸವನ್ನು ಮಾಡುವುದಲ್ಲದೆ ಆತನು ಹೊರಗಡೆ ತಿರುಗಾಡಲಿಕ್ಕೂ ಸಹಾಯ ಮಾಡಬೇಕು. ಮಸೂರದ ಮಧ್ಯಭಾಗದಲ್ಲಿ ಪರೆಯಿಲ್ಲದಿದ್ದಲ್ಲಿ ಹೆಚ್ಚು ಪ್ರಕಾಶವುಳ್ಳ ಬೆಳಕು ಅವಶ್ಯಕ. ಮಸೂರದ ಮಧ್ಯಭಾಗದಲ್ಲಿ ಪರೆಯಿದ್ದರೆ ಬೆಳಕು

ಮಂದವಾಗಿಯೂ ಮತ್ತು ಹಿಂದಿನಿಂದ ಅಥವಾ ಒಂದು ಪಕ್ಕ ದಿಂದ ಬೀಳುವಂತಿರಬೇಕು. ಬಹಳ ವಯಸ್ಸಾಗಿದ್ದವರೂ ಕೂಡ ಶಸ್ತ್ರಚಿಕಿತ್ಸೆ ಮಾಡಿಸಿಕೊಳ್ಳಬಹುದು.

ಒಂದು ಕಣ್ಣಲ್ಲಿ ಪರೆಯಿದ್ದು, ಇನ್ನೊಂದು ಕಣ್ಣಲ್ಲಿ ಸರಿಯಾದ ದೃಷ್ಟಿಯಿದ್ದಲ್ಲಿ ಪರೆ ಬಲಿಯುವವರೆಗೂ ಕಾದು, ನಂತರ ಶಸ್ತ್ರ ಚಿಕಿತ್ಸೆ ಮಾಡಿಸಬೇಕು. ಶಸ್ತ್ರಚಿಕಿತ್ಸೆಗೆ ಮುನ್ನ ರೋಗಿಗೆ ಬೆಳಕನ್ನು ಗುರುತಿಸುವ ಶಕ್ತಿ ಮತ್ತು ಯಾವ ದಿಕ್ಕಿಂದ ಬೆಳಕು ಬರುವು ದೆಂದು ತಿಳಿಸುವ ಶಕ್ತಿಯಿರಬೇಕು. ಪ್ರಾದೇಶಿಕ ಅರಿವುನಾಶಿನಿ ಗಳಡಿಯಲ್ಲಿ ಕಣ್ಪರೆ ಶಸ್ತ್ರಚಿಕಿತ್ಸೆ ನಡೆಸುವುದುಂಟು. ರೋಗಿಗೆ ಜ್ಞಾನ ತಪ್ಪಿಸುವುದಿಲ್ಲ. ಆದರಿಂದ ಶಸ್ತ್ರಚಿಕಿತ್ಸೆ ಮಾಡುವಾಗಲೂ, ಮತ್ತು ನಂತರವೂ ರೋಗಿಯ ಸಹಕಾರ ಅಗತ್ಯ. ಶಸ್ತ್ರಚಿಕಿತ್ಸೆ ಯಾಗುವಾಗ ರೋಗಿಯು ಕಣ್ಣುಗುಡ್ಡೆಗಳನ್ನು ವೈದ್ಯರು ಹೇಳಿದ ಹೊರತು ಚಲಿಸಕೂಡದು. ಶಸ್ತ್ರಚಿಕಿತ್ಸೆಯ ನಂತರ ಎರಡು ಕಣ್ಣುಗಳಿಗೂ ಪಟ್ಟಿಯನ್ನು ಕಟ್ಟುವರು. ಹಾಸಿಗೆಯಲ್ಲಿ 3—4 ಗಂಟೆಗಳು ಅಲ್ಲಾಡದಂತೆ ಮಲಗಿರಬೇಕು. ಅನಂತರ ವೈದ್ಯರ ಅನುಮತಿಯಿಂದ ಒಂದು ಕಡೆಗೆ ತಿರುಗಿಕೊಳ್ಳಬಹುದು. ಮೂರ ನೆಯ ದಿನ ಕಣ್ಣು ತೆರೆದು ಔಷಧಿ ಹಾಕಿ ಚಿಕಿತ್ಸೆ ಮಾಡಿದ ಕಣ್ಣನ್ನು ಮಾತ್ರ ಕಟ್ಟುವರು. ಸೀನುವುದನ್ನು, ಕೆಮ್ಮುವುದನ್ನು ಮಾಡ ಬಾರದು. ಮೊದಲ 48 ಗಂಟೆಗಳ ಆಹಾರವು ಹಾಲು ಮತ್ತು ಹಣ್ಣಿನ ರಸವಾಗಿರಬೇಕು. ಅನಂತರ ಮೆತುವಾದ ಆಹಾರವನ್ನು ಕೊಡಬಹುದು. ಏಳನೆಯ ದಿನ ರೋಗಿಯನ್ನು ಚಿಕಿತ್ಸಾಲಯ ದಿಂದ ಕಳುಹಿಸಬಹುದು. ಪಟ್ಟಿಯನ್ನು ಬಿಚ್ಚಿ, ಕಣ್ಣಿನ ಮುಂದೆ ಹಸಿರು ನೆರಳನ್ನು ಕೊಡುವರು, ಮನೆಯಲ್ಲಿ ಹಾಕುವುದಕ್ಕೆ ತೊಟ್ಟುಗಳನ್ನು ಕೊಡುವರು. ಶಸ್ತ್ರಚಿಕಿತ್ಸೆಯ ನಂತರ ಆರು ವಾರಗಳು ಎಚ್ಚರಿಕೆಯಿಂದಿರಬೇಕು. ಆರು ವಾರಗಳ ನಂತರ

ಕನ್ನಡಕಗಳನ್ನು ಪರೀಕ್ಷಿಸಿ ವೈದ್ಯರು ಕೊಡುವರು. ಒಂದು ಕಣ್ಣಲ್ಲಿ ದೃಷ್ಟಿ ಸರಿಯಿದ್ದಲ್ಲಿ ದ್ವಿದೃಷ್ಟಿಯುಂಟಾಗುವುದರಿಂದ ಕನ್ನಡಕಗಳು ಬೇಕಾಗುವುದಿಲ್ಲ. ಹತ್ತಿರದ ಕೆಲಸಕ್ಕೆ ಬೇರೆ ಕನ್ನಡಕವನ್ನು ಹಾಕಿಕೊಳ್ಳಬೇಕು. ದೂರಕ್ಕೆ ಕೊಟ್ಟ ಗಾಜಿನಿಂದ ಹತ್ತಿರದ ಕೆಲಸ ಮಾಡಲಾಗುವುದಿಲ್ಲ. ಕೆಲವರಿಗೆ ಶಸ್ತ್ರಚಿಕಿತ್ಸೆಯ ನಂತರ ಎಲ್ಲವೂ ಕೆಂಪಗೆ ಇಲ್ಲವೇ ನೀಲಿಯಾಗಿ ಕಾಣಿಸುವುದುಂಟು. ಕ್ರಮೇಣ ಇದು ಸರಿಹೋಗುವುದುಂಟು. ಗಾಬರಿಯಾಗಬೇಕಾದುದಿಲ್ಲ.

## 2. ಗಟ್ಟಿಗಣ್ಣು

ಭಾರತದಲ್ಲಿ ಗಟ್ಟಿಗಣ್ಣು ಕುರುಡನ್ನುಂಟು ಮಾಡುವ ರೋಗಗಳಲ್ಲಿ ಎರಡನೆಯದು. ಸಾಮೂಹಿಕ ನೇತ್ರಶಿಬಿರಗಳಿಗೆ ಬರುವ ರೋಗಿಗಳಲ್ಲಿ ಗಟ್ಟಿಗಣ್ಣು ಹೆಚ್ಚಿನ ಪ್ರಮಾಣದಲ್ಲಿ ಕಾಣಿಸಿಕೊಳ್ಳುತ್ತದೆಂದು ನಮ್ಮ ಅನುಭವ. ಹೆಚ್ಚುಮಂದಿ ಚಿಕಿತ್ಸಾಘಟ್ಟ ಮೀರಿದ ಅಂತಿಮಾವಸ್ಥೆಯಲ್ಲಿ ಚಿಕಿತ್ಸೆಗೆಂದು ಬಹುದೂರದಿಂದ ಬರುವುದುಂಟು. ಈ ರೋಗವನ್ನು ಬೆಳೆಯುತ್ತಿರುವ ಕಣ್ಪರೆಯೆಂದು ತಿಳಿದುಕೊಳ್ಳಲು ಸಾಧ್ಯವಿದೆ. ಈ ರೋಗದ ಶೈಶವಾವಸ್ಥೆಯಲ್ಲಿ ಇದನ್ನು ಪತ್ತೆಹಚ್ಚುವುದು ಬಹು ಕಷ್ಟ. ರೋಗಿಗೆ ಅರಿವಿಲ್ಲದಂತೆಯೇ ವ್ಯಾಪಿಸಿ ಹೆಚ್ಚು ದೃಷ್ಟಿ ನಾಶವಾದ ಮೇಲೆ ರೋಗಿಗೆ ಇದರ ಅರಿವು ಆಗುವುದು. ರೋಗಿಯ ದೃಷ್ಟಿಯು ಕ್ರಮೇಣ ಮಂದವಾಗುತ್ತಾ ಬಂದು ಕೊನೆಗೆ ರೋಗಿಯು ಅಂಧತ್ವವನ್ನು ಅಪ್ಪಬೇಕಾಗುವುದು. ಸುರ್ಮಾಲೇಪನವು ಹಲವುಬಾರಿ ಗಟ್ಟಿಗಣ್ಣಿನ ಉದ್ರೇಕವನ್ನು ಮಾಡಬಲ್ಲದು. ಇದಕ್ಕೆ ಸುರ್ಮಾದಲ್ಲಿ ಬೆರತಿರುವ ಬೆಲಡೋನ ಔಷಧಿಯೇ ಕಾರಣ. ಅಲ್ಲದೆ ಮನೆಯ ಬಳಕೆಗೆ ಕೊಟ್ಟಿರುವ ಅಟ್ರೊಪಿನ್ ತೊಟ್ಟುಗಳನ್ನು ತಿಳಿವಿಲ್ಲದೆ ಇತರರು ಉಪಯೋಗಿಸಿದಲ್ಲಿ ಗಟ್ಟಿಗಣ್ಣಿನ ಉದ್ರೇಕ ಸ್ಥಿತಿಯು ಹಠಾತ್ತನೆ ಕಾಣಿಸಿಕೊಳ್ಳುವುದುಂಟು.

ಕಣ್ಣೊಳಗಿನ ಅಂತರ್ದ್ರವದ ಒತ್ತಡವ ಹೆಚ್ಚು ಅಥವಾ ಗಟ್ಟಿ ಗಣ್ಣನ್ನು ಸರಿಯಾದ ಹಂತದಲ್ಲಿ ಗೊತ್ತುಹಚ್ಚಿದಲ್ಲಿ ಸ್ಥಿತಿಯನ್ನು ಪೂರ್ಣ ಹತೋಟಿಯಲ್ಲಿಡಲು ಸಾಧ್ಯ. ಸಾಕಷ್ಟು ತಿಳುವಳಿಕೆ ಯಿಲ್ಲದಿರುವುದರಿಂದ ಈ ರೋಗವು ಹತೋಟಿಮೀರಿ ಪೂರ್ಣ ಕುರುಡಿನಲ್ಲಿ ಕೊನೆಗೊಳ್ಳುವುದು. ಹತೋಟಿ ಮೀರಿದ ಮೇಲೆ ಯಾವ ಔಷಧಿಯಾಗಲೀ ಅಥವಾ ಶಸ್ತ್ರಚಿಕಿತ್ಸೆಯಾಗಲೀ ಪ್ರಯೋ ಜನವಾಗುವುದಿಲ್ಲ. ಈ ರೋಗದ ಅಂತಿಮಾವಸ್ಥೆಯೇ ಪೂರ್ಣ ಅಂಧತ್ವ. ಆದುದರಿಂದ ಈ ರೋಗವನ್ನು ಮೊದಲಿನಲ್ಲೇ ಅಲ್ಪ ಸ್ವಲ್ಪ ಅನುಮಾನಾಸ್ಪದವಾದ ಚಿನ್ಹೆಗಳು ತೋರಿದ ಕೂಡಲೇ ಗೊತ್ತುಹಚ್ಚಿದರೆ ಈ ರೋಗದಿಂದ ದೃಷ್ಟಿ ನಾಶವಾಗದಂತೆ ಹತೋಟಿಯಲ್ಲಿಡಬಹುದು. ಈ ರೋಗದಲ್ಲಿ ಕಣ್ಣು ಗಟ್ಟಿಯಾಗಿ ಅಂತರ್ದ್ರವದ ಒತ್ತಡದಿಂದ ದೃಷ್ಟಿನರದ ಮೇಲೆ ಒತ್ತಡ ತಗುಲಿ ಅದು ಶಿಥಿಲವಾಗುವುದು. ಒತ್ತಡವು ಹೆಚ್ಚಿದಂತೆಲ್ಲಾ ದೃಷ್ಟಿ ನರದ ತಲೆಯು ಬಟ್ಟಲಿನಂತೆ ಹಳ್ಳಬೀಳುವುದು. ಈ ಒತ್ತಡದ ಕಾರಣವು ಸರಿಯಾಗಿ ತಿಳಿದಿರುವುದಿಲ್ಲ. ಈ ರೋಗದ ಚಿನ್ಹೆಗಳು ಅಷ್ಟು ಸ್ಪಷ್ಟವಾಗಿ ಕಾಣಿಸಿಕೊಳ್ಳದಿರುವುದರಿಂದ ರೋಗಿಗೆ ತಿಳಿ ಯದಂತೆ ರೋಗವು ಬೆಳೆಯುತ್ತ ಹೋಗುವುದು. ಅದರಿಂದ ದೃಷ್ಟಿಯು ದಿನೇ ದಿನೇ ಕ್ಷೀಣವಾಗುವುದು.

ಈ ರೋಗದ ಚಿನ್ಹೆಗಳು ಎದ್ದುಕಾಣುವಾಗ ರೋಗವು ಬಹಳ ಮಟ್ಟಿಗೆ ಬಲಿತಿರುವುದೆಂದು ತಿಳಿಯಬೇಕು. ಅದರಿಂದ ಈ ರೋಗವನ್ನು ತಡೆಗಟ್ಟಲು ಒಂದೇ ಉಪಾಯ. ಈ ರೋಗವು ಮಧ್ಯ ವಯಸ್ಕರಲ್ಲಿ ಕಾಣಿಸಿಕೊಳ್ಳುವುದರಿಂದ ಮಧ್ಯ ವಯ ಸ್ಕರು ಆಗಿಂದಾಗ್ಗೆ ಅವರ ಕಣ್ಣುಗಳನ್ನು ಸರಿಯಾದ ನೇತ್ರವೈದ್ಯ ರಿಂದ ಪರೀಕ್ಷಿಸಿಕೊಳ್ಳುತ್ತಿರಬೇಕು. ಈ ರೋಗವು ಹಲವರಲ್ಲಿ

ಯಾವ ಸೂಚನೆಗಳೂ ಇಲ್ಲದಂತೆ ಇದ್ದುಕೊಂಡು ಕಣ್ಣೊಳಗೆ ಬದಲಾವಣೆಗಳನ್ನು ಮಾಡುವುದುಂಟು. ಎಚ್ಚರಿಕೆ ಕೊಡದೆಯೇ, ದೃಷ್ಟಿಯಲ್ಲಿ ಕಾಣದಷ್ಟು ಬದಲಾವಣೆಯಿಲ್ಲದೆಯೇ ಈ ರೋಗವು ಬೆಳೆಯುವುದರಿಂದ, ಆಗಿಂದಾಗ್ಗೆ ದೃಷ್ಟಿಯನ್ನು ಪರೀಕ್ಷಿಸಿಕೊಳ್ಳುವುದರಿಂದಲೂ, ಕೆಲವು ಸೂಕ್ಷ್ಮವಾದ ಪರೀಕ್ಷೆಗಳನ್ನು ನಡೆಸುವುದರಿಂದಲೂ ಈ ರೋಗವನ್ನು ಪ್ರಪ್ರಥಮದಲ್ಲಿ ಪತ್ತೆಹಚ್ಚಬಹುದು. ಈ ರೋಗವೆಂದು ಗೊತ್ತಾದ ಮೇಲೆ ಬಹುಕಾಲ ನೇತ್ರವೈದ್ಯರ ಆಧೀನದಲ್ಲಿರಬೇಕು. ಇದು ಮೊದಲು ಕಷ್ಟವೆನಿಸಿದರೂ ಮುಂಬರುವ ಅಂಧತ್ವದ ರುದ್ರತೆಯ ಭಯದಿಂದ ಪ್ರತಿದಿನವೂ ವೈದ್ಯರು ಕೊಡುವ ಕಣ್ಣುತೊಟ್ಟುಗಳನ್ನು ಉಪಯೋಗಿಸುತ್ತಾ ನೇತ್ರವೈದ್ಯರ ಸಲಹೆಯಂತೆ ನಡೆಯುವುದು ಮೇಲಲ್ಲವೆ ? ಕಣ್ಣು ತೊಟ್ಟುಗಳಿಂದ ರೋಗದ ಹತೋಟಿ ಸಾಧ್ಯವಿಲ್ಲದಿದ್ದಲ್ಲಿ ಶಸ್ತ್ರಚಿಕಿತ್ಸೆ ಅಗತ್ಯ. ಈ ಶಸ್ತ್ರಚಿಕಿತ್ಸೆಯನ್ನು ಆದಷ್ಟು ತಾರುಣ್ಯದಲ್ಲಿಯೇ ಮಾಡುವುದು ಉತ್ತಮ.

ಮಧ್ಯವಯಸ್ಕರು ಪದೇ ಪದೇ ಕನ್ನಡಕಗಳನ್ನು ಬದಲಾಯಿಸುತ್ತಿದ್ದರೆ ಇಲ್ಲವೇ ಆಗಾಗ್ಗೆ ಕಣ್ಣುನೋವು ಬರುತ್ತಿದ್ದರೆ, ಚಿತ್ರಮಂದಿರಗಳಿಗೆ ಹೋಗಿ ಬಂದಮೇಲೆ ತಲೆನೋವು, ಕಣ್ಣುನೋವು ತಲೆದೋರಿದರೆ, ಬೆಳಕಿನ ಸುತ್ತಲೂ ಕಾಮನಬಿಲ್ಲಿನ ವರ್ತುಲಗಳು ಗೋಚರಿಸಿದರೆ ನೇತ್ರವೈದ್ಯರಿಂದ ಪರೀಕ್ಷಿಸಿಕೊಳ್ಳುವುದು ಅತ್ಯವಶ್ಯಕ. ಈ ರೋಗವು ರೋಗಿಗೂ ಗೋಚರವಿಲ್ಲದೆ ಬರುವುದರಿಂದಲೂ, ವೈದ್ಯರಿಗೂ ಕೂಡ ಎಚ್ಚರವಿಲ್ಲದಿದ್ದರೆ ಕೈಕೊಡುವ ರೋಗವಾಗಿರುವುದರಿಂದಲೂ ಈ ರೋಗದ ವಿಷಯದಲ್ಲಿ ಜನರ ತಿಳುವಳಿಕೆಯನ್ನು ಎಚ್ಚರಿಸಬೇಕಾದುದು ಅತ್ಯವಶ್ಯಕ. ಅಲ್ಲದೆ ವಯಸ್ಸಾದವರ ದೃಷ್ಟಿ ರಕ್ಷಣಾ ಕ್ಲಿನಿಕ್‌ಗಳನ್ನು ಏರ್ಪಡಿಸುವುದು ಒಳ್ಳೆಯದು.

ಹಠಾತ್ತನೆ ಕಾಣಿಸಿಕೊಳ್ಳುವ ಗಟ್ಟಿಗಣ್ಣು :

ಇದು 40 ವಯಸ್ಸು ದಾಟಿದ ಸ್ತ್ರೀಯರಲ್ಲಿ ಹಠಾತ್ತನೆ ಕಾಣಿಸಿಕೊಳ್ಳುವುದು. ಭಾವರಾಗಗಳ ಏರುಪೇರುಗಳು, ಮಲ ಬದ್ಧತೆ, ಚಿಂತೆ, ನಿದ್ರಾಹೀನತೆ. ಉಪವಾಸ ಮುಂತಾದುವುಗಳು ಈ ಸ್ಥಿತಿಗೆ ಸ್ಫೋಟಕಗಳು. ಚಿತ್ರಮಂದಿರಗಳಲ್ಲಿ ಕತ್ತಲಲ್ಲಿ ಕೂಡು ವುದು ಕೂಡ ಸ್ಫೋಟಕವಾಗಬಹುದು.

ಚಿಹ್ನೆಗಳು : ಕಣ್ಣಲ್ಲಿ ಸಹಿಸಲಾಗದ ನೋವು ಮತ್ತು ಕಣ್ಣ ಸುತ್ತ ಮತ್ತು ಹಣೆಯಲ್ಲಿ ಸಿಡಿಯುವ ನೋವು, ಕಣ್ಗೆಂಪು, ದೃಷ್ಟಿಯು ಹಠಾತ್ತನೆ ಮಾಯವಾಗುವುದು, ದೇಹಾಲಸ್ಯ, ವಮನ ವಾಗುವಿಕೆ, ವೇಗನಾಡಿ, ಕುಸಿದು ಬೀಳುವುದು – ಇವು ಈ ರೋಗದ ಚಿಹ್ನೆಗಳು. ಈ ಚಿಹ್ನೆಗಳು ಕಂಡೊಡನೆಯೇ ನೇತ್ರವೈದ್ಯ ರನ್ನು ಕೂಡಲೇ ನೋಡಬೇಕು. ಉದಾಸೀನ ಮಾಡಿದಲ್ಲಿ ದೃಷ್ಟಿ ನಾಶ ಖಂಡಿತ. ಸ್ಥಿತಿಯು ಕೆಲವು ದಿನಗಳ ನಂತರ ಹತೋಟಿಗೆ ಬಂದಂತೆ ತೋರಿದರೂ ಪದೇ ಪದೇ ಕಣ್ಣುನೋವು, ಕಣ್ಗೆಂಪು ಕಾಣಿಸಿಕೊಂಡು ಕೊನೆಗೆ ದೃಷ್ಟಿನಾಶದಲ್ಲಿ ಕೊನೆಗೊಳ್ಳುವುದು. ಈ ಸ್ಥಿತಿಯನ್ನು ತುರ್ತು ಸ್ಥಿತಿಯೆಂದು ಭಾವಿಸಿ ಕೂಡಲೇ ನೇತ್ರ ವೈದ್ಯರ ಸಲಹೆ ಪಡೆಯಬೇಕು. ಕಣ್ಣಿನ ತೊಟ್ಟುಗಳು ಸ್ಥಿತಿಯನ್ನು 24 ರಿಂದ 48 ಗಂಟೆಗಳೊಳಗೆ ಹತೋಟಿಗೆ ತರದಿದ್ದಲ್ಲಿ ಶಸ್ತ್ರ ಚಿಕಿತ್ಸೆ ನಡೆಸಬೇಕು.

3. ದೃಷ್ಟಿಪಟಲದ ಸ್ಥಾನಪಲ್ಲಟ

ಇದು ಸಾಧಾರಣವಾಗಿ ಹತ್ತಿರ ದೃಷ್ಟಿಯುಳ್ಳವರಲ್ಲೂ ಮತ್ತು ವಯಸ್ಸಾದವರಲ್ಲೂ ಹಠಾತ್ತನೆ ಕಾಣಿಸಿಕೊಳ್ಳುವುದು. ಕಣ್ಣಿನ ಗಾಯಗಳು, ಇದ್ದಕ್ಕಿದ್ದ ಹಾಗೆ ಬಗ್ಗುವುದು, ಶೀರ್ಷಾಸನ,ಕಣ್ಪೊರೆಯ ಶಸ್ತ್ರಚಿಕಿತ್ಸೆ–ಇವುಗಳ ನಂತರ ಈ ಸ್ಥಿತಿಯು ಕಾಣಿಸಿಕೊಳ್ಳಬಹುದು.

ಚಿನ್ಹೆಗಳು : ಕಣ್ಣಮುಂದೆ ಇದ್ದಕ್ಕಿದ್ದಂತೆ ಬೆಳಕಿನ ಮಿಂಚು ಕಂಡಲ್ಲಿ ಇದನ್ನು ಎಚ್ಚರಿಸುವ ಚಿನ್ಹೆ ಎಂದು ತಿಳಿಯಬೇಕು. ಇದು ಕಂಡ ಕೆಲವು ಗಂಟೆ ಇಲ್ಲವೆ ದಿನಗಳಲ್ಲಿ ದೃಷ್ಟಿಯು ಪರದೆ ಇಳಿ ಬಿಟ್ಟಂತೆ ಹಠಾತ್ತನೆ ಮಾಯವಾಗುವುದು. ಕೂಡಲೇ ಉದಾಸೀನ ಮಾಡದೆ ನೇತ್ರವೈದ್ಯರನ್ನು ಕಾಣಬೇಕು. ಇದಕ್ಕೆ ಶಸ್ತ್ರಚಿಕಿತ್ಸೆ ಅಗತ್ಯ.

## 4. ದೃಷ್ಟಿಪಟಲದಲ್ಲಿರುವ ಹಳದಿ ಬಿಂದುಪ್ರದೇಶದ ಕ್ಷಯಿಕೆ

ಇದು ಸಾಧಾರಣವಾಗಿ ವಯಸ್ಸಾದವರಲ್ಲಿ ಕಂಡುಬರುತ್ತದೆ. ಅನುವಂಶಿಕೆಯಿದ್ದಲ್ಲಿ ಎಳೆಯ ವಯಸ್ಸಿನವರಲ್ಲೂ ಕಾಣಿಸಿಕೊಳ್ಳ ಬಹುದು. ಎರಡು ಕಣ್ಣುಗಳಲ್ಲೂ ಈ ಸ್ಥಿತಿ ಒದಗಬಹುದು.
ಚಿನ್ಹೆಗಳು : ದೃಷ್ಟಿಮಾಂದ್ಯ ಮತ್ತು ಕೇಂದ್ರ ದೃಷ್ಟಿನಾಶ. ಕೆಲವರಲ್ಲಿ ನೋಡುವ ಬಿಂಬಗಳು ವಕ್ರತೆಯನ್ನು ತಾಳಿರಬಹುದು. ದೃಷ್ಟಿನಾಶವು ಬಹು ಮಂದಗತಿಯಿಂದ ಸಾಗುವುದು. ನೇತ್ರ ದರ್ಶಿನಿಯಿಂದ ದೃಷ್ಟಿಪಟಲದ ಹಳದಿ ಬಿಂದುವಿನ ಪ್ರದೇಶದಲ್ಲಿ ವ್ಯತ್ಯಾಸಗಳನ್ನು ಕಂಡು ಈ ಸ್ಥಿತಿಯನ್ನು ಪತ್ತೆಹಚ್ಚಬಹುದು.

## 5. ದೃಷ್ಟಿನರದ ಊತ ಮತ್ತು ಕ್ಷಯಿಕೆ

ದೃಷ್ಟಿನರದ ಊತವು ಸಾಧಾರಣವಾಗಿ ದೃಷ್ಟಿಪಟಲದ ಊತ ದೊಂದಿಗೆ ಬೆರತಿರುತ್ತದೆ. ಇದು ಶರೀರದ ಆಂತರಿಕ ರೋಗದ ಚಿನ್ಹೆಯಾಗಿರಬಹುದು. ಮೆದುಳಿನ ಗಂತಿಗಳು ಮೆದುಳಿನಲ್ಲಿ ಕೀವನ್ನೂ, ಮೆದುಳಿನ ಪದರದ ಊತಗಳು ದೃಷ್ಟಿನರದ ಊತ ವನ್ನೂ ಉಂಟುಮಾಡಬಲ್ಲವು. ದಡಾರ, ವಿಷಮಶೀತಜ್ವರ, ಮಲೇರಿಯಾ ಮತ್ತು ಇನ್‌ಫ್ಲೂಯೆನ್‌ಜಾ ಜ್ವರಗಳು ಒಮ್ಮೊಮ್ಮೆ

ದೃಷ್ಟಿನರದ ಊತವನ್ನು ತರಬಲ್ಲದು. ಪರಂಗಿ ರೋಗದ ಎರಡನೆಯ ಹಂತವು ದೃಷ್ಟಿನರದ ಊತವನ್ನೂ ಉಂಟುಮಾಡಬಲ್ಲದು. ರಕ್ತನಾಳಗಳ ರೋಗಗಳು, ಮೂತ್ರ ಪಿಂಡಗಳ ರೋಗಗಳು, ರಕ್ತದ ರೋಗಗಳು. ಡಯಾಬಿಟೀಸ್ ಮತ್ತು ಗೌಟ್ ರೋಗಗಳು, ರಕ್ತದ ಒತ್ತಡ–ಇವು ದೃಷ್ಟಿನರದ ಊತವನ್ನು ಉಂಟುಮಾಡಬಲ್ಲವು.

ಚಿಹ್ನೆಗಳು : (i) ದೂರದ ಮತ್ತು ಹತ್ತಿರದ ದೃಷ್ಟಿಯು ಹಠಾತ್ತನೆ ಇಳಿಮುಖವಾಗುವುದು. ಮಬ್ಬು ಬೆಳಕಿನಲ್ಲಿ ದೃಷ್ಟಿ ಇಳಿಮುಖವಾಗಿರುವುದು ಚೆನ್ನಾಗಿ ವ್ಯಕ್ತವಾಗುವುದು.

(ii) ತಲೆನೋವು, ಕಣ್ಣುಗುಡ್ಡೆಯ ಹಿಂದೆ ನೋವು, ಬೆಳಕಿನ ಭೀತಿ, ದೃಷ್ಟಿಮಂಡಲವು ಸಂಕುಚಿತವಾಗುವುದು. ಬಣ್ಣಗಳ ಕುರುಡು, ಕೆಂಪು ಮತ್ತು ಹಸಿರು ಬಣ್ಣಗಳನ್ನು ಗುರುತಿಸಲಾಗದಿರುವಿಕೆ.

ದೃಷ್ಟಿನರದ ಊತವು ಚಿಕಿತ್ಸೆಗೆ ಜಗ್ಗದಿದ್ದಲ್ಲಿ ದೃಷ್ಟಿನರ ಕ್ಷಯಿಸಿ ಪೂರ್ಣ ದೃಷ್ಟಿನಾಶವುಂಟಾಗುವುದು. ನೇತ್ರ ಚಿಕಿತ್ಸೆ ಮತ್ತು ನರವೈದ್ಯರ ಸಲಹೆ ಅವಶ್ಯಕ. ಶರೀರದ ಆಂತರಿಕ ರೋಗಗಳ ಚಿಕಿತ್ಸೆಗೆ ಗಮನ ಕೊಡಬೇಕು.

## ಪ್ರಚಾರೋಪನ್ಯಾಸ ಮಾಲೆ

| | | |
|---|---|---|
| 1. | ನಗೆಯು ನೆಲೆ | ಎಸ್. ಕೆ. ರಾಮಚಂದ್ರರಾವ್ |
| 2. | ನಕ್ಷತ್ರ ಲೋಕ | ಜಿ. ಟಿ. ನಾರಾಯಣರಾವ್ |
| 3. | ಶಾಂತಿನಾಥ ಕವಿ | ಕಮಲ ಹಂಪನಾ |
| 4. | ಶ್ರೀ ಕವಿ ಲಕ್ಷ್ಮೀಶ | ಜಿ. ಎಸ್. ಸಿದ್ಧಲಿಂಗಯ್ಯ |
| 5. | ಉತ್ತಂಗಿ ಚನ್ನಪ್ಪ | ಸ. ಸ. ಮಾಳವಾಡ |
| 6. | ಬಯಲಾಟಗಳು | ಚಂದ್ರಶೇಖರ ಕಂಬಾರ |
| 7. | ನಾಟಕದಲ್ಲಿ ನವ್ಯತೆ | ಪಿ. ಲಂಕೇಶ್ |
| 8. | ದ್ರಾವಿಡ ಸಂಖ್ಯಾವಾಚಕಗಳು | ಹಂಪ. ನಾಗರಾಜಯ್ಯ |
| 9. | ಎದೆ ರೋಗಗಳು | ಎಂ. ಬಸವರಾಜೆ ಅರಸು |
| 10. | ಅರವಿಂದರ ವಿಚಾರಧಾರೆ | ಸಿ. ಕೆ. ವೆಂಕಟರಾಮಯ್ಯ |
| 11. | ಪೂರ್ಣಯೋಗಿ ಶ್ರೀ ಅರವಿಂದರು | ಕೋ. ಚನ್ನಬಸಪ್ಪ |
| 12. | ಪ್ರಾಚೀನ ಸಂಸ್ಕೃತಿ | ಎಸ್. ಕೆ. ರಾಮಚಂದ್ರರಾವ್ |
| 13. | ಪ್ರಾಚೀನ ಭಾರತದ ಆರ್ಥಿಕ ವ್ಯವಸ್ಥೆ | ಎನ್. ಜಿ. ಚಂದ್ರಶೇಖರಯ್ಯ |
| 14. | ಸಣ್ಣ ಕೈಗಾರಿಕೆಗಳು | ಆರ್. ಎಸ್. ಆರಾಧ್ಯ |
| 15. | ವಿವಾಹ ಪದ್ಧತಿಗಳು | ಎಸ್. ಕೆ. ರಾಮಚಂದ್ರರಾವ್ |
| 16. | ಪಾನೀಯಗಳು | ಕೆ. ಎಸ್. ಲಕ್ಷ್ಮಣರಾವ್ |
| 17. | ಚಂದ್ರಲೋಕ ಯಾತ್ರೆ | ಪಿ. ಎಸ್. ವೆಂಕಟಸ್ವಾಮಿಶೆಟ್ಟಿ |
| 18. | ಬೆಳಕಿನ ಸ್ವರೂಪ | ಬಿ. ವಿ. ನಾರಾಯಣರಾವ್ |
| 19. | ದೂರದರ್ಶನ | ಕೆ. ಶೇಷಾದ್ರಿ ಅಯ್ಯಂಗಾರ್ |
| 20. | ಸೂಕ್ಷ್ಮದರ್ಶಕಗಳು ಮತ್ತು ದೂರದರ್ಶಕಗಳು | ಕೆ. ಶೇಷಾದ್ರಿ ಅಯ್ಯಂಗಾರ್ |
| 21. | ಕುರುಡು | ಎಸ್. ಟಿ. ಪುಟ್ಟಣ್ಣ |
| 22. | ಭಯ : ಸರಳ ವಿಶ್ಲೇಷಣೆ | ಎಂ. ಶಿವರಾಂ |
| 23. | ಉಕ್ಕು : ತಯಾರಿಕೆ ಮತ್ತು ರಚನೆ | ಕೆ. ಆರ್. ಮೋಹನ್ |
| 24. | ನೀರಾವರಿ ಸಮಸ್ಯೆಗಳು | ಕೆ. ಎನ್. ಶಿವಶಂಕರರಾವ್ |
| 25. | ಅಂತರ್ಜಲ | ಸಿ. ನಾಗಣ್ಣ |
| 26. | ಪಂಪ | ತ. ಸು. ಶಾಮರಾಯ |
| 27. | ದೇಹರಚನೆ ಹಾಗೂ ಮೂಳೆಗಳು | ಎಸ್. ಬಿ. ವಸಂತ ಕುಮಾರ್ |
| 28. | ಶ್ರೀನಿವಾಸ ರಾಮಾನುಜನ್ | ಜಿ. ಟಿ. ನಾರಾಯಣರಾವ್ |
| 29. | ಮಹಾಕವಿ ಕುಮಾರನಾಶಾನ್ | ಬಿ. ಕೆ. ತಿಮ್ಮಪ್ಪ, ಟಿ. ವೆಂಕ |
| 30. | ತುಳ್ಳಲ್‌ಕವಿ ಕುಂಜನ್ ನಂಬಿಯಾರ್ | ಬಿ. ಕೆ. ತಿಮ್ಮಪ್ಪ, ಟಿ. ವೆಂಕ |
| 31. | ಪರಾಮಾನಸಶಾಸ್ತ್ರ | ಎಸ್. ಕೆ. ರಾಮಚಂದ್ರರಾವ್ |
| 32. | ಕ್ಷಯ | ಎಂ. ಬಸವರಾಜೆ ಅರಸು |